

ಸ್ಕೌಟ್ ಶತಮಾನೋತ್ಸವ – 2007

Price Rs. 3.00/- per copy only




# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

News Magazine

Vol - 7 | April - 2008 | NO - 04



ಡಾ|| ಆನಿಬೆಸೆಂಟ್‌ಪಾರ್ಕ್ ತರಬೇತಿ ಕೇಂದ್ರಕ್ಕೆ ದಿನಾಂಕ 25 ಮಾರ್ಚ್ 2008ರಂದು ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆಯ ಕಾರ್ಯದರ್ಶಿ ಶ್ರೀ ಶಿವರಾಂ, ಭಾ.ಆ.ಸೇ. ಭೇಟಿ ನೀಡಿದಾಗ ರಾಜ್ಯ ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಪುಷ್ಪಗುಚ್ಛ ನೀಡಿ ಸ್ವಾಗತಿಸಿದರು. ಸ್ಥಾನಿಕ ಆಯುಕ್ತ ಶ್ರೀ ಎಂ.ಎ ಚೆಲ್ಲಯ್ಯ, ಸಹಾಯಕ ಸಂಘಟನಾ ಆಯುಕ್ತ ಶ್ರೀ ಎಸ್. ಓಮೇಶ್ವರಯ್ಯ ಇವರುಗಳನ್ನು ಚಿತ್ರದಲ್ಲಿ ಕಾಣಬಹುದು.



ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕಾರ್ಯರ್ಶಿ ಶ್ರೀ ಶಿವರಾಂ. ...ಾ.ಆ.ಸೇ, ದಿನಾಂಕ25-03-08ರಂದು ಡಾ|| ಆನಿಬೆಸೆಂಟ್ ಪಾರ್ಕಿಗೆ ...ೇಟಿ ನೀಡಿ ಸಂಸ್ಥೆಯು ಸಿದ್ದಪಡಿಸಿದ್ದ ತರಬೇತಿ ಶಿಬಿರದ "ಮಾಸ್ಟರ್ ಪ್ಲಾನ್" ...ಗ್ಗೆ ಪದಾಧಿಕಾರಿಗಳೊಂದಿಗೆ ಚರ್ಚಿಸಿದರು. ಈ ಸಂದರ್ಭದಲ್ಲಿ ಸಂಸ್ಥಾಪಕ ...ಾರ್ಡ್ ಬೇಡನ್ ಪೊವೆಲ್ಲರ ಪ್ರತಿಮೆಯನ್ನು ಗೌರವಿಸಿದರು. ಮುಖ್ಯ ಆಯುಕ್ತ ...ೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಆಯುಕ್ತ(ಸ್ಕೌಟ್ಸ್) ಶ್ರೀ ಸಿ. ಆರ್. ಮಹಮದ್ ...ಾಹಿರುದ್ದೀನ್, ಸ್ಥಾನಿಕ ಆಯುಕ್ತ ಶ್ರೀ ಎಂ.ಎ. ಚೆಲ್ಲಯ್ಯ, ಶ್ರೀ ಎ.ಎಂ. ಶಂಕರ್, ...ೀ ಎಸ್.ಓಮೇಶ್ವರಯ್ಯ ಹಾಗೂ ಭೂ.ಸೇನಾ ನಿಗಮದ ಸಹಾಯಕ ನಿರ್ದೇಶಕ ...ೀ ಬಿ.ಹೆಚ್.ಗುರುಮೂರ್ತಿ ಇವರುಗಳನ್ನು ಚಿತ್ರದಲ್ಲಿ ಕಾಣಬಹುದು.



ಕೊಂಡಜ್ಜಿ ತರಬೇತಿ ಶಿಬಿರದಲ್ಲಿ ದಿ.25 ಏಪ್ರಿಲ್ 08 ರಂದು ರಾಷ್ಟ್ರಪತಿ ಸ್ಕೌಟ್-ಗೈಡ್ ಪೂರ್ವಭಾವಿ ತರಬೇತಿ ಶಿಬಿರವನ್ನು ಕರ್ನಾಟಕ ಸರಕಾರದ ನಿವೃತ್ತ ಮುಖ್ಯ ವಾಸುಶಿಲ್ಪಿ ಪ್ರೊ. ಎಸ್.ಎನ್. ಕಿರಣ್‌ಶಂಕರ್ ಗಿಡಕ್ಕೆ ನೀರು ಹಾಕಿ ಉದ್ಘಾಟಿಸಿದರು. ಮುಖ್ಯ ಆಯುಕ್ತ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಆಯುಕ್ತ ಶ್ರೀ ಸಿ.ಆರ್. ಮಹಮದ್ ಜಾಹಿರುದ್ದೀನ್, ಶ್ರೀ ಎಂ.ಆರ್. ಪಾಟೀಲ್, ಶ್ರೀ ಜೆ.ಎ. ನರಗುಂದ ಶ್ರೀ ಕೆ.ಬಿ. ರವೀಂದ್ರನಾಥ್, ಶ್ರೀ ಕೆ.ಬಿ. ವಿಜಯಕುಮಾರ್, ಶ್ರೀ ಡಿ. ಬಸವರಾಜ್, ಶ್ರೀ ಎಂ. ಜೆ. ಶಿವಕುಮಾರ್, ಶ್ರೀಮತಿ ಎಂ. ರತ್ನ, ಶ್ರೀಮತಿ ಜಾನಕಿವೇಣುಗೋಪಾಲ್, ಶ್ರೀಮತಿ ಕೆ.ಕೆ. ಲೀಲಾ, ಶ್ರೀಮತಿ ಸಿ. ಮಂಜುಳ, ಶ್ರೀಮತಿ ಕೆ. ರಾಜಲಕ್ಷ್ಮಿ ಸಮಾರಂಭದಲ್ಲಿ ಉಪಸ್ಥಿತರಿದ್ದರು.



ದಿನಾಂಕ 12 ಮತ್ತು 13ನೇ ಏಪ್ರಿಲ್ 2008ರಂದು ತುಮಕೂರಿನ ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ ಸ್ಕೌಟ್ ಶತಮಾನೋತ್ಸವ ರ್‍ಯಾಲಿಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಉದ್ಘಾಟಿಸಿದರು. ಶ್ರೀಮತಿ ರವಿವೆಸ್ಲಿ ಸ್ಥಾನಿಕ ಆಯುಕ್ತರು(ಗೈ), ರಾಜ್ಯ ಸಂಸ್ಥೆ, ಶ್ರೀಮತಿ ಆಶಾ ಪ್ರಸನ್ನಕುಮಾರ್, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಶ್ರೀ ಶಿವರುದ್ರಪ್ಪ ಮತ್ತು ಇತರ ಜಿಲ್ಲಾ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.



ಉಡುಪಿ ಜಿಲ್ಲಾ ಸಂಸ್ಥೆವತಿಯಿಂದ ಬ್ರಹ್ಮಾವರ ಕೃಷಿ ವಿಜ್ಞಾನ ಕೇಂದ್ರ ಇವರ ಸಹಕಾರದೊಂದಿಗೆ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ಕೃಷಿ, ತೋಟಗಾರಿಕೆ ತರಬೇತಿಯನ್ನು ಉಡುಪಿ ಜಿಲ್ಲಾಧಿಕಾರಿಗಳಾದ ಶ್ರೀಮತಿ ಪಿ.ಹೇಮಲತಾ, ಭಾ.ಆ.ಸೇ ಇವರು ಉದ್ಘಾಟಿಸಿದರು. ಡಾ॥ ಎಂ.ಕೆ. ಹೊನ್ನಭೈರಯ್ಯ, ಶ್ರೀ ಎಡ್ವಿನ್ ಆಳ್ವ, ಶ್ರೀ ಕೆ.ಎಂ. ಉಡುಪ, ಶ್ರೀ ರಬೀಂದ್ರನಾಯಕ್, ಶ್ರೀ ಎಸ್.ಡಿ. ಸಂಪತ್ ಸಾಮ್ರಾಜ್ಯ, ಡಾ॥ ಟಿ.ಆರ್. ಗುರುಪ್ರಸಾದ, ಶಿಬಿರದ ನಾಯಕರಾದ ಶ್ರೀ ಶೇಖರ ಪೂಜಾರಿ ಇವರನ್ನು ಚಿತ್ರದಲ್ಲಿ ಕಾಣಬಹುದು.



ದಿನಾಂಕ 19-4-2008ರಂದು ಬಳ್ಳಾರಿ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ನಡೆದ ಜಿಲ್ಲಾ ಮಟ್ಟದ ಹಿಮಾಲಯ ವುಡ್‌ಬ್ಯಾಡ್ಜ್ ಪದವೀಧರರ ಸಮಾವೇಶ ಸಮಾರಂಭದಲ್ಲಿ ವಿಮ್ಸ್ ನಿರ್ದೇಶಕರು ಡಾ॥ ಖಾಜಾ ನಸೀರುದ್ದೀನ್‌ರವರು ರಾಷ್ಟ್ರಪತಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಮಾಣ ಪತ್ರ ವಿತರಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಆರ್. ವೆಂಕಣ್ಣ ಚಿತ್ರದಲ್ಲಿದ್ದಾರೆ.



ಬಾಗಲಕೋಟೆ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ ಸಂಯುಕ್ತ ಆಶ್ರಯದಲ್ಲಿ ಚಿತ್ರಭಾನುಕೋಟೆಯಲ್ಲಿ ಲಾರ್ಡ್ ಬೇಡನ್ ಪೊವೆಲ್ಲರ ಜನ್ಮದಿನಾಚರಣೆ ನಿಮಿತ್ತ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಜೆ.ಬಿ. ಇದ್ದಲಗಿ ಜ್ಯೋತಿ ಬೆಳಗಿಸುತ್ತಿರುವರು. ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.





ತುಮಕೂರಿನ ವಿದ್ಯಾನಿಕೇತನ ಪ್ರೌಢಶಾಲೆಯಲ್ಲಿ ಹಮ್ಮಿಕೊಂಡಿದ್ದ ಸ್ಥಾಪಕರ ದಿನಾಚರಣೆ ಸಂದರ್ಭದಲ್ಲಿ ಚುಟುವಟಿಕೆಯಲ್ಲಿ ತೊಡಗಿರುವ ಸ್ಕೌಟ್ಸ್ - ಗೈಡ್ಸ್‌ಗಳು.




**Vol -7** **April - 2008** **No. 04**



## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ..........................................

ಮಾನ್ಯರೇ,

ದಿನಾಂಕ 25 ಮಾರ್ಚ್ 2008ರಂದು ಡಾ. ಆನಿಬೆಸೆಂಟ್ ತರಬೇತಿ ಕೇಂದ್ರಕ್ಕೆ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಕಾರ್ಯದರ್ಶಿ ಶ್ರೀ ಶಿವರಾಂ, ಭಾ. ಆ. ಸೇ. ಭೇಟಿ ನೀಡಿ, ಸಂಸ್ಥೆಯು ಸಿದ್ಧಪಡಿಸಿದ್ದ ತರಬೇತಿ ಶಿಬಿರದ ಮಾಸ್ಟರ್ ಪ್ಲಾನ್ (ಸಮಗ್ರ ಯೋಜನಾ ನಕ್ಷೆ) ಬಗ್ಗೆ ಸಂಸ್ಥೆಯ ಪದಾಧಿಕಾರಿಗಳೊಂದಿಗೆ ವಿವರವಾಗಿ ಚರ್ಚಿಸಿದರು. ರಾಜ್ಯ ಭೂಸೇನಾ ನಿಗಮದವರು ನಿರ್ಮಿಸುತ್ತಿರುವ ಊಟದ ಕೋಣೆ ಮತ್ತು 'ಉಗ್ರಾಣ' ಕಟ್ಟಡವನ್ನು ವೀಕ್ಷಿಸಿದರು. ಶಿಬಿರದ ವಿವಿಧ ವಿಭಾಗಗಳಿಗೆ ಭೇಟಿ ನೀಡಿ ಆಗಿರುವ ಮೂಲಭೂತ ಸೌಕರ್ಯಗಳು ಹಾಗೂ ನೂತನ ಯೋಜನೆಯಲ್ಲಿ ಸಿದ್ಧಪಡಿಸಿರುವ ಅಭಿವೃದ್ಧಿಕಾರ್ಯಗಳ ಬಗ್ಗೆ ವಿವರಗಳನ್ನು ಪಡೆದು ನನ್ನೊಂದಿಗೆ ರಾಜ್ಯ ಆಯುಕ್ತ ಹಾಗೂ ನಿಗಮದ ಅಧಿಕಾರಿಗಳೊಂದಿಗೆ ಚರ್ಚಿಸಿದರು. ಶಿಬಿರದಲ್ಲಿ ಈ ವರೆವಿಗೆ ಆಗಿರುವ ಅಭಿವೃದ್ಧಿ ಕಾರ್ಯಗಳ ಬಗ್ಗೆ ಮೆಚ್ಚುಗೆ ಸೂಚಿಸಿ, ಸಿದ್ಧಪಡಿಸಿರುವ ನೂತನ ಅಭಿವೃದ್ಧಿ ಕೆಲಸಗಳಿಗೆ ಸರ್ಕಾರದ ಎಲ್ಲಾ ನೆರವು ನೀಡಲು ಸಹಕರಿಸುವುದಾಗಿ ಆಶ್ವಾಸನೆ ನೀಡಿದರು.

ರಾಜ್ಯದ ಚಾಮರಾಜನಗರ, ಮೈಸೂರು, ದಕ್ಷಿಣ ಕನ್ನಡ, ಗದಗ, ಬಿಜಾಪುರ, ರಾಯಚೂರು ಹಾಗೂ ಬೆಂಗಳೂರು ಉತ್ತರ ಜಿಲ್ಲೆಗಳು ಈ ತಿಂಗಳಲ್ಲಿ ಯಶಸ್ವಿಯಾಗಿ ತರಬೇತಿ ಶಿಬಿರಗಳನ್ನು ಏರ್ಪಡಿಸಿದ ಬಗ್ಗೆ ವರದಿಗಳು ಬಂದಿವೆ.

12 ಏಪ್ರಿಲ್ 2008 ರಂದು ತುಮಕೂರು ಜಿಲ್ಲಾ ಸಂಸ್ಥೆ ಶ್ರೀಕ್ಷೇತ್ರ ಸಿದ್ಧಗಂಗಾ ಮಠದಲ್ಲಿ ಏರ್ಪಡಿಸಿದ್ದ ವಿಶ್ವ ಸ್ಕೌಟ್ ಶತಮಾನೋತ್ಸವ ಜಿಲ್ಲಾ ರ್‍ಯಾಲಿಯಲ್ಲಿ ಭಾಗವಹಿಸಿ ಸಂಸ್ಥೆಯಲ್ಲಿ ಹಲವು ದಶಕಗಳು ಸೇವೆ ಸಲ್ಲಿಸಿ, ಈಗಲೂ ದಳನಡೆಸುತ್ತಿರುವ ಸ್ಕೌಟರ್–ಗೈಡರ್‌ಗಳು ಹಾಗು ಆಯುಕ್ತರು – ತರಬೇತಿ ನಾಯಕರುಗಳನ್ನು ಅಭಿನಂದಿಸಿ ಗೌರವಿಸಿದ್ದೇನೆ. ಈ ಸಂದರ್ಭದಲ್ಲಿ ಶತಾಯುಷಿ ಶ್ರೀಕ್ಷೇತ್ರಾಧ್ಯಕ್ಷರಾದ ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ ಡಾ. ಶಿವಕುಮಾರ ಮಹಾಸ್ವಾಮೀಜಿಯವರ ಕೃಪಾಶೀರ್ವಾದವನ್ನು ಪಡೆಯುವ ಸದವಕಾಶ ನನ್ನದಾಗಿತ್ತು. ಈ ಬಗ್ಗೆ ಸಚಿತ್ರ ವರದಿ ಸಂಚಿಕೆಯಲ್ಲಿದೆ.

ದಿನಾಂಕ 14 ಏಪ್ರಿಲ್ 2008 ರಂದು ಮಲ್ಲೇಶ್ವರಂ ಕ್ಲೂನಿ ಕಾನ್ವೆಂಟ್‌ನಲ್ಲಿ ಬೆಂಗಳೂರು ಉತ್ತರ ಜಿಲ್ಲೆಯವರು ಏರ್ಪಡಿಸಿದ ತರಬೇತಿ ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿ, ರಾಜ್ಯ ಸಂಸ್ಥೆಯ ಪರವಾಗಿ ಶಿಬಿರಾರ್ಥಿಗಳಾಗಿ ಬಂದಿದ್ದ 89 ಸಹೋದರಿಯರನ್ನು ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದ್ದೇನೆ. ಈ ಸಂದರ್ಭದಲ್ಲಿ ಮಾತನಾಡಿದ ಅಭ್ಯರ್ಥಿಗಳ ಅನಿಸಿಕೆ ಹಾಗೂ ನಾಯಕರುಗಳ ಚಿಂತನೆ – ಶತಮಾನೋತ್ಸವ ಆಚರಣೆಯ ಶುಭ ಸಂದರ್ಭದಲ್ಲಿ – ಎಲ್ಲರಲ್ಲೂ ಉತ್ಸಾಹ, ಸಂಭ್ರಮ, ಸಡಗರ ಉಂಟುಮಾಡಿದ್ದನ್ನು ಸ್ವತಃ ಅನುಭವಿಸಿ ಆನಂದಪಟ್ಟಿದ್ದೇನೆ.

ದಿನಾಂಕ 11 ಏಪ್ರಿಲ್ 2008 ರಂದು ರಾಜ್ಯ ಕಾರ್ಯಾಲಯದಲ್ಲಿ ಜರುಗಿದ ರಾಜ್ಯ ಸಹಾಯಕ ಸಂಘಟನಾ ಆಯುಕ್ತರುಗಳ, ಜಿಲ್ಲಾ ಸಂಘಟನಾಧಿಕಾರಿಗಳ ಸಭೆಯಲ್ಲಿ ಈ ವರ್ಷದಲ್ಲಿ ಜರುಗಿರುವ ಶಿಬಿರಗಳು, ತರಬೇತಿಗಳು, ಗಣತಿ, ರಾಜ್ಯ ಹಾಗು ರಾಷ್ಟ್ರಮಟ್ಟದ ನಿಯೋಜನೆಗಳ ಬಗ್ಗೆ ಸುದೀರ್ಘವಾಗಿ ಚರ್ಚಿಸಲಾಯ್ತು. ರಾಜ್ಯದ ಪದಾಧಿಕಾರಿಗಳು ಸಭೆಯಲ್ಲಿ ಭಾಗವಹಿಸಿ ಸೂಕ್ತ ಸಲಹೆ-ಸೂಚನೆಗಳನ್ನು ಕ್ಷೇತ್ರ ಕಾರ್ಯಕರ್ತರುಗಳಿಗೆ ನೀಡಿದ್ದಲ್ಲದೆ - ಚಳವಳಿ ಮುನ್ನಡೆಸುವಲ್ಲಿ ಇನ್ನೂ ಹೆಚ್ಚಿನ ಪರಿಶ್ರಮ ಪಡಬೇಕೆಂದು ಭಾಗವಹಿಸಿದ ಎಲ್ಲಾ ಸಹೋದ್ಯೋಗಿಗಳಲ್ಲಿ ಕೋರಿದ್ದೇನೆ.

ದಿನಾಂಕ 16 ಏಪ್ರಿಲ್ 2008 ರಂದು ಕೊಂಡಜ್ಜಿ, ತರಬೇತಿ ಕೇಂದ್ರದಲ್ಲಿ ರಾಷ್ಟ್ರಪತಿ ಸ್ಕೌಟ್-ಗೈಡ್ ಪೂರ್ವಭಾವಿ ತರಬೇತಿ ಶಿಬಿರದ ಉದ್ಘಾಟನೆಯಲ್ಲಿ ಭಾಗವಹಿಸಿ ರಾಜ್ಯದ 16 ಜಿಲ್ಲೆಗಳಿಂದ ಬಂದಿದ್ದ 560ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳನ್ನು ಕಡ್ಡಾಯವಾಗಿ ಎಲ್ಲರು ರಾಷ್ಟ್ರಪತಿ ಸ್ಕೌಟ್-ಗೈಡ್ ಆಗುವವೆಂಬ ಪ್ರತಿಜ್ಞೆ ಪಡೆದಿದ್ದೇನೆ. ಸಮಾರಂಭದಲ್ಲಿ ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯವಾಸ್ತು ಶಿಲ್ಪಿ ಶ್ರೀಎಸ್.ಎನ್. ಕಿರಣ್ ಶಂಕರ್, ಮುಖ್ಯ ಅತಿಥಿಯಾಗಿ ಭಾಗವಹಿಸಿ ಶಿಬಿರವನ್ನು ಉದ್ಘಾಟಿಸಿ, ತಮ್ಮ ಹಾಸ್ಯಭರಿತ ಹರಿತಭಾಷೆಯಿಂದ ಯುವ ಸಮುದಾಯಕ್ಕೆ ಅಗತ್ಯ ಮಾರ್ಗದರ್ಶನ ಮಾಡಿದರು. ರಾಜ್ಯ ಆಯುಕ್ತ ಶ್ರೀ ಸಿ.ಆರ್. ಮಹಮದ್ ಜಹಿರುದ್ದೀನ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

ರಾಜ್ಯದ ಹಲವಾರು ಜಿಲ್ಲೆಗಳಿಂದ 560ಕ್ಕೂ ಹೆಚ್ಚು ಅರ್ಹ ಸ್ಕೌಟ್-ಗೈಡ್‌ಗಳು ಪೂರ್ವಭಾವಿ ತರಬೇತಿ ಶಿಬಿರದಲ್ಲಿ ಭಾಗವಹಿಸಿರುವುದು ನಿಜಕ್ಕೂ ಸಂತಸದ ವಿಷಯ. ಶಿಬಿರದ ಸ್ಕೌಟ್ ವಿಭಾಗದ ನಾಯಕರಾಗಿ ಹಿರಿಯ ತರಬೇತುದಾರ ಶ್ರೀ ಜಿ.ಎ. ನರಗುಂದ ಹಾಗೂ ಗೈಡ್ ವಿಭಾಗದ ನಾಯಕಿಯಾಗಿ ಶ್ರೀಮತಿ ಎಂ. ರತ್ನ ಅವರು ಕಾರ್ಯ ನಿರ್ವಹಿಸಿದರು. ರಾಜ್ಯ ಸಂಘಟನಾ ಆಯುಕ್ತೆ ಶ್ರೀಮತಿ ಜಾನಕಿ ವೇಣುಗೋಪಾಲ್, ರಾಜ್ಯ ತರಬೇತಿ ಆಯುಕ್ತೆ, ಶ್ರೀಮತಿ ಕೆ.ಕೆ. ಲೀಲಾ ಹಾಗೂ ರಾಜ್ಯದೆಲ್ಲೆಡೆಯಿಂದ ಹಿರಿಯ ಅನುಭವಿ ನಾಯಕರುಗಳು ಭಾಗವಹಿಸಿ ಸೂಕ್ತ ಮಾರ್ಗದರ್ಶನ ನೀಡುತ್ತಿದ್ದಾರೆ.

ದಿನಾಂಕ 3 ರಿಂದ 7 ಮೇ, 2008 ರ ವರೆವಿಗೆ ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ಪಾರ್ಕ್‌ನಲ್ಲಿ ಮತ್ತೊಂದು ಪೂರ್ವಭಾವಿ ತರಬೇತಿ ಶಿಬಿರ ಆಯೋಜಿಸಲಾಗಿದ್ದು, ಅರ್ಹರಿರುವ ಎಲ್ಲಾ ಸ್ಕೌಟ್-ಗೈಡ್ ಅಭ್ಯರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಶಿಬಿರದಲ್ಲಿ ಭಾಗವಹಿಸಲು ಕೋರುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# Bring Welcome Change to Your Life

A Leader has tasks to achieve. The success and compeltion of projects will take him and his organisation to great heights. Style of leaders vary. The ultimate aim of a leader is to influence others to take some actions for effective results. It is a fact that an average person dislikes and avoids work, if possible. Most people need to be controlled, directed, threatened with punishment to put forth sufficient efforts to achieve their goals. As the number of workers in any organisation, most people prefer to be directed, so that they can avoid responsibility. People at the lower level at some places have no chance of rising further, because of their own competence or skill levels. They have relatively little ambition and would be content with the security, of their job. It is for this reason that external control and threat of punishment is used for bringing out required effort, Depending upon the circumsatances, a Manager makes, sells, or presents decisions, or decision limits or invites ideas and sugge-stions. Style used depends upon the situation, so that the best effectivieness results. For Success, a effective manager must be aware of situational sensi-tivity and he should be able to assess the situation, as well as the level of his team,



For success, you should learn to love what you are doing This will blur the distinction, between work and what you must do. Important thing is to love your work. Money alone is not enough to get happi-ness, or peace of mind, We should try to put our life an an Autopilot. This is one way of realising one's goals automatically.

However, each and every person has some unique abilities in terms of skill, talents, ability and strength. The strength of your abilities will depend on what you want to achieve during your lifetime. If you are deter-mined to be a doctor, then you will show those abilities in your professio. God has made billions of human beings, but each one is gifted with inimitable gifts.

Employee's recognition is an important factor in reinforcing employee's self worth. It is an employee's recognition tool, which is more effective than any thing else known to human beings. It is very essential for pushing and improving your business to newer and greater heights. This is one way to get a competitive edge in any profession or commerce or trade or industry When you recognize people effectively, you strengthen and buttress with it, the actions and behaviours

you most approve and perhaps want the same to be maintained as well as repeated. An effective employee recognition system can be simple, immediate and powerful It can be by a word or by a letter or other reward This is one action, which sticks in the memory of the people as long as they live. Everybody, irrespective of thier position loves recognition and approval of their conduct. Even my approval and appreciation of the work done by the Prime Minister of India has evoked a smile of approval. I myself have framed and preserved. an appreciation conveyed to me by the Government of Karnataka for the work done by me as Superintendent of Police, Bidar District of Karnataka State more than 40 years. ago. It is a good idea, to be thankful and grateful, for any and all favrou done. It should be done specifically, and individually for anything done, I make it. a point a 'thank you', gift whenever I am invited to any meal by a friend or for some other programme. Thanks can be in the form of recognising contribution to any venture or a personal achievement. If you are boss, make it a habit to thank the employees for any extra effort made or work done. It is one of the grievances of the emplo-yees, that their bosses neither appreciate nor thank them for the contribution or work they have done for their orga-nisation. Everybody is hungry for recognition and appreciation, whether it is the children or wife or husbands or office workers.

"A basic rule for bosses and administrator should be to 'Pass the admiration and pride in a job well down to those who deserve it. People become more creative and dedicated, when they can earn recognition for their contribution and ideas. When a good initiative or a scheme or proposal is put forward, the creator's immediate superiors should be prompt in appreciating the same. Empleyee recognition is not just a pleasant and fine thing to do. It is a message tool that re-inforces and rewards the most important end result people create for any organisation. Recognition, is declaration of the actions and behaviours you most want your people to replicate.We hear it quite often said that manpower is your most important resoruce. In fact, they are one source, without which you cannot do anything. Having resources are not enough. It is equally important to create a work environ-ment, that will encourage and reinforce their ability to increase productivity, build up high self-esteem and develop-ment and pregression. Reward and recognition are a must, Says a Chinese proverb; The gem cannot be polished without friction, nor mari perfected without trials.

Today many organisations allover the wrold, spend a great deal of money and time trying to increase the orginality of their employees, hoping thereby to get a competitive edge in the markeplace. But this approach will make no difference unless management also reco-gnises and implements the precious ideas, which are thrown up by its members.

We all get disappointed from time to time about something or the other. It does not mean that it is a permanent condition and it is always going to be so. There is always tomorrow to look forward to, for better performance and better life, You should refuse to pessimistic or hopeless about any situation. If you do so, you will land up in a whirlpool of despair, which is in itself a generator of unhappiness. Always look to the brighter and best side and believe that tomorrow is going to be better than today. The secret formula for success and happiness lies in you. It is simply in your approach and your attitude to life.

*Courtacy* **"Yuvakarnataka" April 2008**

**- Jogendar Singh IPS**
**Rtd. CBI Director,**
**Former Director of Youth Service & Sports**

# World Earth Day On 22 April 2008

## Save Earth before it goes up in smoke!

To combat climate change we need to promote low-carbon economies and lifestyles such as improved energy efficiency, alternative energy sources, forest conservation and eco-friendly consumption. On World Earth Day. let's pledge to give back to earth what we have derived from it since time immemorial, and take an oath to save the earth from destruction.

### *LET EACH OF US*

- Harvest Rain Water.
- Plant Trees
- Carry Jute / Cloth Bags
- Use Less Plastic
- Utilise the Natural Resources Economically
- Reduce, Recycle and Reuse
- Use Public Transport/Car pooling System.
- Check Emission Levels Regularly

### ಸ್ಕೌಟ್ ಕೌಶಲ್ಯ

### ಶಿಬಿರಾಗ್ನಿ ಉದಂತ ಸಂ-2

# ಸ್ಕೌಟುಗಳು ಏನು ಮಾಡುವರು?

..............ಹಿಂದಿನ ಸಂಚಿಕೆಯಿಂದ

## ದುರ್ಬಲರ ರಕ್ಷಣೆಯಲ್ಲಿ ಶ್ರದ್ಧೆ (Chivalry)

(ಕಡುಗಲಿಗಳ ಬಗ್ಗೆ ಇಲ್ಲಿ ಬರುವ ವಿವರಣೆಯೆಲ್ಲವೂ ಹಿಂದೆ ಇಂಗ್ಲೆಂಡ್‌ನಲ್ಲಿ ಪ್ರಚಲಿತವಾಗಿದ್ದದು)

ಹಿಂದಿನ ಕಾಲದಲ್ಲಿ ಕಡುಗಲಿಗಳು (Knights) ನಿಜವಾದ ಸ್ಕೌಟ್‌ಗಳಾಗಿ ಇರುತ್ತಿದ್ದರು. ಅವರ ನಿಯಮಗಳು, ಈಗ ನಮ್ಮಲ್ಲಿರುವ ಸ್ಕೌಟ್ ನಿಯಮದಂತೆಯೇ ಇರುತ್ತಿದ್ದುವು.

ಕಡುಗಲಿಗಳು ತಮ್ಮ ಗೌರವ ಮರ್ಯಾದೆಗಳನ್ನು, ಅತಿಪವಿತ್ರವಾದ ಆಸ್ತಿಯನ್ನಾಗಿ ಭಾವಿಸುತ್ತಿದ್ದರು. ಸುಳ್ಳು ಹೇಳುವುದು, ಕಳ್ಳತನ ಮುಂತಾದ ಅವಮಾನಕರ ಕೆಲಸಗಳನ್ನು ಮಾಡುತ್ತಲೇ ಇಂಲಿಲ್ಲ. ಆ ರೀತಿ ಮಾಡುವುದಕ್ಕಿಂತಲೂ ಸಾಯುವುದು ಮೇಲೆಂದು ಭಾವಿಸಿದ್ದರು.

ಅವರು ತಮ್ಮ ರಾಜ್ಯ, ಧರ್ಮ ಹಾಗೂ ಆತ್ಮಗೌರವಗಳ ರಕ್ಷಣೆಗಾಗಿ ಹೋರಾಡಿ ಮಡಿಯಲು ಸದಾ ಸಿದ್ಧರಾಗಿರುತ್ತಿದ್ದರು.

ಪ್ರತಿ ಕಡುಗಲಿಗೂ ಒಬ್ಬ ಅನುಚರ/ಬೆಂಗಾವಲು (Squire) ಮತ್ತು ಕೆಲವು ಸಶಸ್ತ್ರ ಸೈನಿಕರು-ನಮ್ಮ ಪೆಟ್ರೋಲ್ ನಾಯಕ, ದ್ವಿತೀಯ ಮತ್ತು ನಾಲ್ಕೈದು ಸ್ಕೌಟುಗಳು ಇರುವಂತೆ ಇರುತ್ತಿದ್ದರು.

### ಕಡುಗಲಿಗಳ ನಿಯಮಾವಳಿ

☞ ಕಡುಗಲಿಯ ಪೆಟ್ರೋಲ್‌ನವರು, ಎಲ್ಲಾ ವೇಳೆಗಳಲ್ಲಿಯೂ, ಕಷ್ಟಕಾರ್ಪಣ್ಯಗಳಿರಲಿ, ಸುಖ, ಶಾಂತಿಯಿರಲಿ, ಬೆಂಬಿಡದೆ ತಮ್ಮ ನಾಯಕನೊಡನೆ ಇರುತ್ತಿದ್ದರು ಮತ್ತು ಅವನ ಭಾವನೆಗಳನ್ನೇ ಪ್ರತಿಬಿಂಬಿಸುತ್ತಿದ್ದರು.

☞ ಅವರಿಗೆ ಗೌರವ ಮರ್ಯಾದೆಗಳು ಪವಿತ್ರವಾದುವು.

☞ ಅವರು ದೇವರಿಗೂ, ಅವರ ರಾಜನಿಗೂ, ಅವರ ದೇಶಕ್ಕೂ ನಿಷ್ಠೆಯಿಂದ ಇರುತ್ತಿದ್ದರು.

☞ ಅವರು ವಿಶೇಷವಾಗಿ ಹೆಂಗಸರು, ಮಕ್ಕಳು ಮತ್ತು ಅಶಕ್ತರ ವಿಷಯದಲ್ಲಿ ದಯಾಪರರಾಗುತ್ತಿದ್ದರು.

☞ ಅವರು ಎಲ್ಲರಿಗೂ ಸಹಾಯಕರಪರರಾಗಿರುತ್ತಿದ್ದರು

☞ ಅವರು ತಮ್ಮ ಸಂಪಾದನೆಯಲ್ಲಿ ಉಳಿತಾಯ ಮಾಡಿ. ಇತರರಿಗೆ ಆಹಾರ ಮತ್ತು ಹಣವನ್ನು ನೀಡುತ್ತಿದ್ದರು.

☞ ಅವರು ತಮ್ಮ ದೇಶ ಮತ್ತು ಧರ್ಮಗಳನ್ನು ಶತ್ರುಗಳಿಂದ ರಕ್ಷಿಸಲು, ತಮಗೆ ತಾವೇ ಶಸ್ತ್ರಗಳ ಬಳಕೆಯಲ್ಲಿ ತರಬೇತು ಪಡೆಯುತ್ತಿದ್ದರು.

☞ ಅವರ ಈ ಎಲ್ಲಾ ಕೆಲಸಗಳನ್ನು ಮಾಡಲು ಆರೋಗ್ಯವಂತರಾಗಿ, ದೃಢಕಾಯರಾಗಿ, ಉತ್ಸಾಹದಿಂದ ಕಾರ್ಯಶೀಲ ರಾಗಿರುತ್ತಿದ್ದರು.

ಕಡುಗಲಿಗಳ ಇಂತಹ ಮಾದರಿಯನ್ನು ಅನುಸರಿಸವುದಕ್ಕಿಂತಲೂ, ಉತ್ತಮವಾದುದನ್ನು ಸ್ಕೌಟುಗಳಾದ ನೀವು ಮಾಡಲಾರಿರಿ.

ಇನ್ನೊಂದು ಮುಖ್ಯ ಅಂಶವೆಂದರೆ ಅವರು ಪ್ರತಿದಿನವೂ ಯಾರಿಗಾದರೂ ಒಂದು ಉಪಕಾರವನ್ನು ಮಾಡಲೇಬೇಕಾಗಿದ್ದಿತು. ಈ ಅಂಶವು ನಮ್ಮ ನಿಯಮಗಳಲ್ಲೊಂದಾಗಿದೆ

ಬೆಳಗಾಗೆದ್ದಕೂಡಲೇ ಸಂಜೆಯೊಳಗೆ, ಯಾರಿಗಾದರೂ "ಒಂದು ಉಪಕಾರವನ್ನು ಮಾಡಬೇಕು" ಎಂದು ನೆನಪಿಟ್ಟುಕೋ. ಕರವಸ್ತ್ರ ಅಥವಾ ಕಂಠವಸ್ತ್ರದ ಕೊನೆಯಲ್ಲಿ ಈ ಅಂಶವನ್ನು ನೆನಪಿಗೆ ತರುವುದಕ್ಕಾಗಿ, ಒಂದು ಗಂಟನ್ನು ಹಾಕಿಕೋ. ದಿನದ ಉಪಕಾರವನ್ನು ಮಾಡಲು ಮರೆತುದಾದರೆ, ಮರುದಿನ ಎರಡು ಉಪಕಾರಗಳನ್ನು ಮಾಡು. ನಿನ್ನ ಸ್ಕೌಟ್ ಪ್ರತಿಜ್ಞೆಯಲ್ಲಿ ಹೇಳುವಂತೆ, ನೀನು ನಿನ್ನ ಗೌರವ ಸಾಕ್ಷಿಯಾಗಿ, ಅದನ್ನು ಮಾಡಲು ಬದ್ಧನೆಂಬ ಅಂಶವನ್ನು ನೆನಪಿನಲ್ಲಿಟ್ಟುಕೋ. ಸ್ಕೌಟುಗಳು ದಿನಕ್ಕೆ ಒಂದು ಉಪಕಾರವನ್ನು ಮಾತ್ರ ಮಾಡ ಬೇಕಾಗಿದೆಯೆಂದು ತಿಳಿಯಬೇಡ. ಕನಿಷ್ಠ ಒಂದನ್ನು ಮಾತ್ರ ಮಾಡಲೇಬೇಕು. ನೀನು ಎಷ್ಟು ಉಪಕಾರಗಳನ್ನು ಮಾಡಲು ಸಾಧ್ಯವೋ ಅಷ್ಟನ್ನೂ ಮಾಡು. ಮಾಡಿದಷ್ಟೂ ಒಳ್ಳೆಯದು.

**ಸ್ಕೌಟಾಗಿ ನೀನು ಪ್ರತಿದಿನವೂ, ಯಾರಿಗಾದರೂ**
**ಒಂದಾದರೂ ಉಪಕಾರವನ್ನು ಮಾಡಿಯೇ ತೀರಬೇಕು.**

ಉಪಕಾರವು ಸಣ್ಣದಾದರೂ ನಡೆಯುತ್ತದೆ. ದೀನರಿಗಾಗಿ ಇಟ್ಟಿರುವ ಹುಂಡಿಯಲ್ಲಿ ಹಣವನ್ನು ಹಾಕಬಹುದು; ವೃದ್ಧರನ್ನು ರಸ್ತೆ ದಾಟಿಸಬಹುದು; ಬಸ್ಸು ರೈಲುಗಳಲ್ಲಿ ಇನ್ನೊಬ್ಬರಿಗೆ ಕೂಡಲು ಅವಕಾಶ ಮಾಡಬಹುದು; ಬಾಯಾರಿದ ಪ್ರಾಣಿಗಳಿಗೆ-ಕುದುರೆ, ಹಸು ಇತ್ಯಾದಿ., - ನೀರನ್ನೊದಗಿಸಬಹುದು; ದಾರಿಯಲ್ಲಿ ಬಿದ್ದಿರುವ ಬಾಳೆಹಣ್ಣಿನ ಸಿಪ್ಪೆಯನ್ನು ತೆಗೆಯಬಹುದು. - ಇವೆಲ್ಲವೂ ಉಪಕಾರಗಳೇ, ಆದರೆ ಮಾತ್ರ ದಿನಕ್ಕೊಂದುಪಕಾರ ಮಾಡಲೇಬೇಕು. ಮಾಡಿದ ಕೆಲಸಕ್ಕೆ ಪ್ರತಿಯಾಗಿ ಯಾವುದೇ ರೀತಿಯ ಸಂಭಾವನೆಯನ್ನೂ ಪಡೆಯದಿದ್ದರೆ ಮಾತ್ರ ಅದು ಉಪಕಾರವೆನಿಸಿಕೊಳ್ಳುತ್ತದೆ.

## ಪ್ರಾಣ ರಕ್ಷಣೆ

ಬಿರುಸಾಗಿ ಯುದ್ಧವು ನಡೆಯುವ ಸಂದರ್ಭದಲ್ಲಿ ನಡೆಯುವ ಕೋಲಾಹಲದಲ್ಲಿ ತನ್ನ ಸಹೋದ್ಯೋಗಿಯ ಪ್ರಾಣವನ್ನುಳಿಸಲು ಸೈನಿಕನು ಮುನ್ನುಗ್ಗುತ್ತಾನೆ. ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ, ಗಣಿಗಳಲ್ಲಿಯೂ, ಕಾರ್ಖಾನೆಗಳಲ್ಲಿಯೂ, ದಿನನಿತ್ಯ ಜೀವನದಲ್ಲಿ, ಭಯಾನಕ ಪ್ರಮಾದಗಳು ಹಠಾತ್ತಾಗಿ ಸಂಭವಿಸುತ್ತವೆ. ಆಗ ತನ್ನ ಸಹಜೀವಿಯೊಬ್ಬನ ಪ್ರಾಣವನ್ನು ಉಳಿಸುವ ಕೆಲಸವು ಯುದ್ಧರಂಗದ ಸೈನಿಕನಷ್ಟೇ ವಿರೋಚಿತವಾದುದು.

ಸಾವಿರಾರು ಸ್ಕೌಟುಗಳು ಈಗಾಗಲೆ ಪ್ರಾಣರಕ್ಷಣೆ ಮಾಡಿ ಪದಕಗಳನ್ನು ಗಳಿಸಿರುತ್ತಾರೆ. ಇನ್ನು ಮುಂದೆಯೂ ಮತ್ತಷ್ಟು ಮಂದಿ ಅದೇ ರೀತಿ ಗಳಿಸುವರೆಂಬ ವಿಶ್ವಾಸವು ನನಗಿದೆ.

ನಿಮ್ಮಲ್ಲಿ ಬಹಳ ಜನರಿಗೆ, ಯಾವಾಗಲಾದರೊಮ್ಮೆ ಪ್ರಾಣರಕ್ಷಣೆ ಮಾಡುವ ಅವಕಾಶವು ಬಂದೇಬರುತ್ತದೆ. ನೀವು "ಸದಾ ಸಿದ್ಧ"ರಾಗಿರಬೇಕಷ್ಟೆ. ಅಪಘಾತವು ಸಂಭವಿಸಿದ ಕ್ಷಣದಲ್ಲಿ ಏನುಮಾಡಬೇಕು? ಎಂಬುದು ತಿಳಿದಿರಬೇಕು. ಅಂತಹ ಸಮಯ ಒದಗಿದಾಗ ಕೂಡಲೇ ಮಾಡಿ ತೀರಬೇಕು.

ಪುಸ್ತಕವನ್ನೋದಿ ತಿಳಿದುಕೊಂಡು, "ನನಗದು ತಿಳಿದಿದೆ" ಎಂದು ಬೀಗಬಾರದು. ಅದನ್ನು ಅಭ್ಯಾಸ ಮಾಡಬೇಕು. ಮತ್ತೆ ಮತ್ತೆ ಅನುಸರಿಸಬೇಕಾದ ಕ್ರಮಗಳನ್ನು ಹೇಗೆ ಮಾಡಬೇಕೆಂಬುದನ್ನು ತಿಳಿದು. ಅವನ್ನು ಸಕ್ರಮವಾಗಿ ಮಾಡಬೇಕು. ಉದಾ: ಹೊಗೆಯಲ್ಲಿ ಉಸಿರಾಡುವಾಗ, ಮೂಗು ಮತ್ತು ಬಾಯಿಗಳನ್ನು ಒದ್ದೆ ಬಟ್ಟೆಯಿಂದ ಮುಚ್ಚಿಕೊಳ್ಳುವುದು; ಬೆಡ್‌ಷೀಟ್ ಅಥವಾ ಇತರ ಉದ್ದದ ಬಟ್ಟೆಯನ್ನು, ಪಟ್ಟೆಪಟ್ಟೆಯಾಗಿ ಹರಿದು, ಹಗ್ಗದಂತೆ ಮಾಡಿಕೊಂಡು, ಬೆಂಕಿಯಿಂದ ಪಾರಾಗುವುದು; ಮ್ಯಾನ್ ಹೋಲ್‌ನ ಮುಚ್ಚಳವನ್ನು ತೆಗೆದು, ಒಳಗಿನ ಕೆಟ್ಟ ಗಾಳಿಯು ಹೊರಗೆ ಹೋಗಲು ಅವಕಾಶ ಮಾಡುವುದು; ಜ್ಞಾನ ತಪ್ಪಿದ ವ್ಯಕ್ತಿಯನ್ನು ಮೇಲೆತ್ತಿ ಸಾಗುವುದು; ಮುಳುಗುತ್ತಿರುವ ವ್ಯಕ್ತಿಯನ್ನು ರಕ್ಷಿಸಿ ಉಸಿರು ಬರುವಂತೆ ಮಾಡುವುದು ಇತ್ಯಾದಿ.

ಇವೆಲ್ಲವನ್ನೂ ನೀವು ಕಲಿತ ಮೇಲೆ, ನಿಮ್ಮಲ್ಲಿ ಆತ್ಮವಿಶ್ವಾಸ ಮೂಡಿ, ಅಪಘಾತವು ಸಂಭವಿಸಿದಾಗ, ಬೇರೆಯವರು ಏನೂ ತೋಚದೆ ತೊಳಲಾಡುತ್ತಿರುವಾಗ, ನೀವು ಸದ್ದಿಲ್ಲದೆ ಮುಂದೆ ಬಂದು, ಮಾಡಬೇಕಾದುದನ್ನು ಮಾಡುತ್ತೀರಿ.

....................ಮುಂದುವರೆಯುವುದು

# ಹಗೆತನದ ಹುಚ್ಚು

– ಗೊ.ರು. ಚನ್ನಬಸಪ್ಪ

ಯುದ್ಧ ಒಂದು ಪ್ರಾಚೀನ ಭೂತ, ದೆವ್ವ, ರಾಕ್ಷಸ. ಮಾನವ ಅದನ್ನು ಪಳಗಿಸುವ ಪ್ರಯತ್ನವನ್ನು ನಡೆಸುತ್ತಲೇ ಬಂದಿದ್ದರೂ ಅದು ಬದುಕಿಯೇ ಇದೆ. ಯುಗಯುಗದಲ್ಲಿ ಈ ಭೂತವನ್ನು ಎದುರಿಸಲೇಬೇಕಾಗಿದೆ. ಇಲ್ಲವೇ ಬೆಲೆ ತೆರಬೇಕಾಗಿದೆ – ಇದು ನಿವೃತ್ತ ಸೇನಾ ಮುಖ್ಯಸ್ಥನೊಬ್ಬನ ಮಾತು.

ಈ ಮಾತಿನ ಸತ್ಯದರ್ಶನ ನಮಗೆ ನಿತ್ಯವೂ ಆಗುತ್ತಿದೆ. ಇದಕ್ಕೆ ಇತ್ತೀಚೆಗಷ್ಟೇ ನಡೆದ ಇರಾಕ್ ಯುದ್ಧ ಸಾಕ್ಷಿಯಾಗಿದೆ. ಈ ಯುದ್ಧದಿಂದ ಮುಗ್ಧತೆ ದಗ್ಧವಾಗಿದೆ, ಮಣ್ಣು ರಕ್ತಸಿಕ್ತವಾಗಿದೆ. ಮಾನವ ಸಮುದಾಯದ ನೀತಿಯ ಬೆಟ್ಟ ದ್ವೇಷದ ದಳ್ಳುರಿಗೆ ಸಿಕ್ಕಿ ಉರುಳುತ್ತಿದೆ; ಕರುಣೆಯ ನದಿಗೆ ಕ್ರೌರ್ಯದ ಬೆಂಕಿ ಬಿದ್ದು ಉರಿಯುತ್ತಿದೆ.

ದೂರದರ್ಶನದಲ್ಲಿ ನಾವು ದಿನವೂ ನೋಡುತ್ತಿದ್ದೇವೆ. ಸಿಡಿಯುವ ಬಂದೂಕು, ಬಡಿಯುವ ಬಾಂಬು, ಹೊಸಗಾಳಿಯನ್ನು ಹಸಗೆಡಿಸುವ ವಿಷದ ಹೊಗೆ, ನೋವಿನಿಂದ ನರಳುವ ಸಾವಿರ ಸಾವಿರ ರೋದನದ ದನಿ, ಸಾಯುವ ಅಸಹಾಯಕ ಅಮಾಯಕರು, ಮೇಲೆ ಯುದ್ಧ ವಿಮಾನಗಳ ಹಾರಾಟ, ನೆಲದ ಮೇಲೆ ಶಸ್ತ್ರಸಜ್ಜಿತ ಸೈನಿಕರ ಓಡಾಟ, ಸಮಯ ಸಾಧಕರು ನಡೆಸುವ ಲೂಟಿ – ಎಲ್ಲ ಅಯೋಮಯ ಪರಿಸ್ಥಿತಿ; ಲೋಕವೆಲ್ಲ ಮೂಕಸಾಕ್ಷಿ.

ಈ ಯುದ್ಧ ಏತಕ್ಕಾಗಿ? ಏತರಿಂದ? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ಸಾಹಸಪಡಬೇಕಾಗಿಲ್ಲ. ಇದಕ್ಕೆ ಕಾರಣ ಕೇವಲ ಕೆಲವು ವ್ಯಕ್ತಿಗಳ ಅಹಂಕಾರ ಅಸಹನೆಗಳ ಕಿಚ್ಚು; ಸ್ವಾರ್ಥಲಾಲಸೆಯ ಅಚ್ಚು; ಹಗೆತನದ ಹುಚ್ಚು.

ಯುದ್ಧ ಬೇಡವೆನ್ನುವನೂ ಮಾನವನೇ, ಯುದ್ಧಕ್ಕೆ ದೂಡುವವನೂ ಮಾನವನೇ, ಯುದ್ಧ ಮಾಡುವವನೂ ಅವನೇ, ಕಾರಣನೂ ಅವನೇ; ಕಾರ್ಯವೂ ಅವನೇ. ಒಟ್ಟಾರೆ ಅವನ ಅವಿವೇಕವೇ ಎಲ್ಲ ದುರಂತಕ್ಕೆ ಮೂಲ,

ಅಮೇರಿಕಾ ಈ ಯುದ್ಧ ನಡೆಸಬಾರದೆಂದು ಲೋಕವೆಲ್ಲ ಕೂಗಿ ಹೇಳಿತು. ಆದರೆ ಆ ರಾಷ್ಟ್ರಕ್ಕೆ ಯಾರ ಕೂಗೂ ಕೇಳಲಿಲ್ಲ. ಯುದ್ಧ ನಡದೇಬಿಟ್ಟಿತು. ಸಹಸ್ರಸಹಸ್ರ ಜನ ಸಾವನ್ನಪ್ಪಿದರು. ಕೋಟಿ ಕೋಟಿ ರೂ.ಗಳ ಆಸ್ತಿಪಾಸ್ತಿ ನಾಶಗೊಂಡವು. 'ಶಾಂತಿ ಸ್ಥಾಪನೆಗಾಗಿ ಶಸ್ತ್ರ'ದ ಘೋಷಣೆ ಮಾಡಿದ ಅಮೇರಿಕಾದಿಂದ ಇರಾಕಿನಲ್ಲಿ ಎಷ್ಟರಮಟ್ಟಿಗೆ ಶಾಂತಿ ನೆಲಸುವುದೆಂಬುದನ್ನು ಕಾದು ನೋಡಬೇಕು.

ವಾಸ್ತವವಾಗಿ, ಮಾನವಪ್ರಜ್ಞೆ ಇರುವುದು ಯುದ್ಧ ನಡೆಸಿ ಶಾಂತಿ ಸ್ಥಾಪಿಸುವುದಕ್ಕಲ್ಲ; ಯುದ್ಧ ನಡೆಸದೆಯೇ ಶಾಂತಿ ಕಾಪಾಡುವುದಕ್ಕೆ. ಆದರೆ ಕೆಲವು ರಾಷ್ಟ್ರಗಳು ಶಾಂತಿ ಸ್ಥಾಪನೆಯ ನೆಪದಲ್ಲಿ ಹಿಡಿದಿರುವ ಮಾರ್ಗ ಹೆದರಿಕೆ–ಬೆದರಿಕೆಗಳ ವಿಕೃತಮಾರ್ಗ. ಇದಕ್ಕೆಲ್ಲ ಕಾರಣ ಕೇವಲ ಮಾನವನ ಅಪಜ್ಞಾನ, ಅಪತೃಷ್ಣೆ, ಅಪಚಿಂತನೆ, ಅಪವ್ಯಯ, ಅಪಮಾನಗಳು. ಕೆಲವು ವಾರಗಳ ಹಿಂದೆ ಆಂಗ್ಲಪತ್ರಿಕೆಯೊಂದರಲ್ಲಿ 'ನಿಂತು ಚಿಂತಿಸಿ' ಎಂಬ ಅಂಕಣ ಬರಹದಲ್ಲಿ ಅನಾಮಿಕರೊಬ್ಬರು ಇಂದಿನ ನಮ್ಮ ಬದುಕಿನ ವಿಲಕ್ಷಣದ ಬಗೆಗೆ ಕನ್ನಡಿ ಹಿಡಿದಿದ್ದಾರೆ. ಆ ಕನ್ನಡಿಯಲ್ಲಿ ಕಂಡ ಸ್ವರೂಪವನ್ನು ಹೀಗೆ ಸಾರಗೊಳಿಸಬಹುದು.

ನಮಗೆ ಎತ್ತರದ ಮನೆಗಳಿವೆ; ಆದರೆ ಮನಗಳು ಕುಬ್ಜವಾಗಿವೆ. ವಿಶಾಲ ರಸ್ತೆಗಳಿವೆ; ವಿವೇಕ ಸಂಕುಚಿತವಾಗಿದೆ. ಹೆಚ್ಚು ವೆಚ್ಚಮಾಡುತ್ತೇವೆ, ಕಡಮೆ ದುಡಿಯುತ್ತೇವೆ; ಹೆಚ್ಚು ಕೊಳ್ಳುತ್ತೇವೆ. ಮನಗಳು ಹಿಗ್ಗಿವೆ; ಕುಟುಂಬಗಳು ಕುಗ್ಗಿವೆ. ಸವಲತ್ತುಗಳು ಸಾಕಷ್ಟಿವೆ; ಸರಿಯಾದ ಬಳಕೆಯಿಲ್ಲ. ಪದವಿಗಳು ಅತಿಯಾಗಿವೆ; ಪ್ರಜ್ಞೆ ಮಿತಗೊಂಡಿದೆ; ಜ್ಞಾನ ವಿಕಾಸಗೊಂಡಿದೆ. ವಿವೇಚನೆ ವಿಕಾರಗೊಂಡಿದೆ. ತಜ್ಞರು ಹೆಚ್ಚಾಗಿದ್ದಾರೆ; ಸಮಸ್ಯೆಗಳೂ ಹೆಚ್ಚಾಗಿವೆ. ನಮ್ಮ ಆಸ್ತಿಗಳನ್ನು ಹಿಗ್ಗಿಸಿದ್ದೇವೆ; ಮೌಲ್ಯಗಳನ್ನು ಕುಗ್ಗಿಸಿದ್ದೇವೆ. ಮಿತಿಮೀರಿ ಮಾತನಾಡುತ್ತೇವೆ; ಪ್ರೀತಿಸುವುದನ್ನೇ ಮರೆತಿದ್ದೇವೆ. ಬದುಕಲು ಹೇಗೆ ಗಳಿಸಬೇಕೆಂಬುದು ನಮಗೆ ತಿಳಿದಿದೆ; ಆದರೆ ಬದುಕುವುದೇ ತಿಳಿದಿಲ್ಲ. ನಮ್ಮ ಆಯುಸ್ಸು ಹೆಚ್ಚಿದೆ; ಆಯಸ್ಸಿಗೆ ತಕ್ಕ ಬದುಕಿಲ್ಲ. ದೂರದ ಚಂದ್ರನಲ್ಲಿಗೆ ಹೋಗಿ ಬಂದಿದ್ದೇವೆ; ಅದರೆ ಹತ್ತಿರದವರನ್ನು ಕಾಣಲು ರಸ್ತೆ ದಾಟುವುದೂ ಕಷ್ಟವಾಗಿದೆ. ನಾವು ಬಾಹ್ಯಾಕಾಶವನ್ನು ಗೆದ್ದಿದ್ದೇವೆ; ನಮ್ಮ ಅಂತರಾವರಣ ವಶವಾಗಿಲ್ಲ. ನಾವು ವಾಯುನಿರ್ಮಲೀಕರಣ ಬಲ್ಲೆವು; ಆದರೆ ಮನಸ್ಸನ್ನು ಮಲಿಗೊಳಿಸಿದ್ದೇವೆ. ಪರಮಾಣುವನ್ನು ಪರಿಚ್ಛೇದಿಸಿದ್ದೇವೆ; ಆದರೆ ಪೂರ್ವಾಗ್ರಹ ಪೀಡಿತರಾಗಿದ್ದೇವೆ. ನಮ್ಮ ವರಮಾನ ಹೆಚ್ಚಿದೆ; ವರ್ತನೆಗೆ ಹುಚ್ಚು ಹಿಡಿದಿದೆ. ನಾವು ಗಾತ್ರ ಹೆಚ್ಚಿಸಿಕೊಂಡಿದ್ದೇವೆ, ಪಾತ್ರ ಮುಚ್ಚಿಹೋಗಿದೆ. ಎತ್ತರಕ್ಕೆ ಬೆಳೆದಿದ್ದೇವೆ, ಆದರೆ ನಡೆತೆಯಲ್ಲಿ ಕೊಳೆತಿದ್ದೇವೆ. ಅಗಾಧ ಲಾಭ ಗಳಿಕೆಯಿದೆ, ಆದರೆ ಗಾಢ ಸಂಬಂಧ ಕ್ಷೀಣಿಸುತ್ತಿದೆ. ವಿಶ್ವಶಾಂತಿ ಹೇಳುತ್ತೇವೆ; ಮನೆಯಲ್ಲೇ ಸಮರ ಸಾಗುತ್ತಿದೆ. ಬಿಡುವು ಬಹಳವಿದೆ; ನಗೆಯೇ ಕಾಣುತ್ತಿಲ್ಲ. ಬಗೆ ಬಗೆಯ ಆಹಾರಗಳು ಬಂದಿವೆ; ಆರೋಗ್ಯವೇ ಕೆಟ್ಟಿದೆ. ಸುಂದರ ಗೃಹಗಳಿವೆ; ಆದರೆ ಮನೆಗಳು ಮುರಿದಿವೆ. ನಾವು ಕೂಡುವುದಕ್ಕಿಂತ ಹೆಚ್ಚು ಅಗಲುತ್ತೇವೆ.

ಹೀಗೆ ಈ ಪಟ್ಟಿಯನ್ನು ಎಷ್ಟು ಬೇಕಾದರೂ ಬೆಳಸುತ್ತ ಹೋಗಬಹುದು. ಆದರೆ ಮುಖ್ಯವಾದದ್ದು ವ್ಯಕ್ತಿಯ ಅಂತರೀಕ್ಷಣೆ; ಸ್ವವಿಮರ್ಶೆ. ಶುದ್ಧ ಪ್ರಜ್ಞೆಯ ಅಂತರೀಕ್ಷಣೆಯಿಂದ ಮಾತ್ರ ಲೋಕಶಾಂತಿ ಸಾಧ್ಯ. ಅಹಂಕಾರ, ಅಸಹನೆ, ಸ್ವಾರ್ಥ ಮತ್ತು ಹಗೆತನಗಳ ಹುಚ್ಚಿನಿಂದ ಲೋಕನಾಶ.

# ಜಿಲ್ಲಾ ವಾರ್ತೆ

## ಉತ್ತರ ಕನ್ನಡ ಜಿಲ್ಲೆ

### ಹೊನ್ನಾವರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಾಹಸ ಚಟುವಟಿಕೆ ಶಿಬಿರ :

ಮಾರ್ಚ್ 29, 2008 ರಂದು ಮಾರ್ಥೋಮಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಸಾಹಸ ಚಟುವಟಿಕೆಯ ಶಿಬಿರ ನಡೆಯಿತು. ಅಂದು ಮುಂಜಾನೆ ಈ ಶಿಬಿರದ ಉದ್ಘಾಟನಾ ಸಮಾರಂಭ ನಡೆಯಿತು. ಹೊನ್ನಾವರ ತಾಲ್ಲೂಕಿನ ಕಾರ್ಯನಿರ್ವಾಹಕ ಅಭಿಯಂತರರಾದ ಶ್ರೀ ಸಿದ್ಧರಾಜು ಇವರು ಉದ್ಘಾಟಕರಾಗಿ ಆಗಮಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಜಿ.ಜಿ. ಸಭಾಹಿತ್‌ರು ಆಗಮಿಸಿದ್ದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ವಿ.ವಿ. ನಾಯ್ಕ, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎಸ್.ಎಂ. ಲೋಪಿಸ್, ಸಹಾಯಕ ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಶೋಭಾ ಕುಲಕರ್ಣಿ, ತರಬೇತಿ ತಂಡದ ನಾಯಕಿಯರಾದ ಶ್ರೀಮತಿ ಬೇಬಿ ವೈದ್ಯಾ, ಶಾಲೆಯ ಮುಖ್ಯೋಪಾಧ್ಯಾಯರಾದ ರ್‍ಯಾಚಲ್ ಥಾಮಸ್, ಮಿಸ್. ಪ್ರೀತಿರಾವ್ ಇವರು ಉಪಸ್ಥಿತರಿದ್ದು ಶುಭ ಕೋರಿದರು. ಸಭೆಯ ಅಧ್ಯಕ್ಷತೆಯನ್ನು ಪ್ರಾಂಶುಪಾಲರಾದ ಫಾದರ್ ಥಾಮಸ್ ಮ್ಯಾಥ್ಯೂರವರು ವಹಿಸಿದ್ದರು.

ಸಮಾರಂಭ ಉದ್ಘಾಟಿಸಿದ ಶ್ರೀ ಸಿದ್ಧರಾಜುರವರು ತಾವು ಸ್ವತಃ 40 ಅಡಿ ಎತ್ತರದ ಟವರ್ ಏರುವ ಮೂಲಕ ಶಿಬಿರವನ್ನು ಉದ್ಘಾಟಿಸಿದರು. ಇದೇ ಸಮಾರಂಭದಲ್ಲಿ ಹಿರಿಯ ಸ್ಕೌಟ್ ಅನುಭವಿಕರಾದ ರಾಜ್ಯಪ್ರಶಸ್ತಿ ವಿಜೇತ, ಎಲ್ಲರಿಗೂ ಹಿರಿಯ ಗುರುಗಳಾದ ಹಾಗೂ ತಾಲ್ಲೂಕಿನ ಸ್ಕೌಟ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಜೆ. ಅಬ್ರಹಾಂರವರಿಗೆ ಸ್ಕೌಟ್ ಶತಮಾನದ ಅಂಗವಾಗಿ ಮರ್ಥೋಮಾ ಸ್ಕೌಟ್ಸ್ ಗೈಡ್ಸ್‌ಗಳು ಸೇರಿಕೊಂಡು ಸನ್ಮಾನಿಸಿ ಅವರ ಆಶೀರ್ವಾದವನ್ನು ಪಡೆದರು. ಮುಖ್ಯ ಅತಿಥಿಗಳಾದ ಡಾ॥ ಜಿ.ಜಿ. ಸಭಾಹಿತರು ಮಾತನಾಡಿದರು. ನಂತರ ರೋವರ್ಸ್‌ಗಳಿಗೆ ಹಾಗೂ ಸ್ಕೌಟ್ಸ್ ಗೈಡ್ಸ್‌ಗಳಿಗೆ ಪ್ರಶಸ್ತಿ ಪತ್ರ ವಿರತಣೆ ಮಾಡಲಾಯಿತು.

## ಗುಲ್ಬರ್ಗಾ ಜಿಲ್ಲೆ

ವಿಶ್ವ ಸ್ಕೌಟಿಂಗ್ ಶತಮಾನೋತ್ಸವದ ಅಂಗವಾಗಿ ಗುಲ್ಬರ್ಗಾ ನಗರದ ಎಸ್.ಎಂ. ಪ್ರಾಥಮಿಕ ಶಾಲೆ (ಬಸವೇಶ್ವರ ಕಾಲನಿ) ಆವರಣದಲ್ಲಿ ಶ್ರೀ ಸರ್ದಾರ ವಲ್ಲಭ ಭಾಯಿ ಪಟೇಲ್ ಶಾಲೆ, 'ಪವನ್' ರೋವರ್ ಕ್ರ್ಯೂ ಹಾಗೂ ಆಯುರ್ವೇದ ಮುಕ್ತದಳ ಸಂಯುಕ್ತ ಆಶ್ರಯದಲ್ಲಿ ದಿನಾಂಕ 9.3.2008 ರಂದು ರಕ್ತದಾನ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಶ್ರೀಮತಿ ಪದ್ಮಪ್ರಿಯಾ, ಪ್ರಾಂಶುಪಾಲರು, ಮಾಜಿ ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಎಮ್. ಗೋಪಾಲರಾವ ಮುಕ್ತದಳ ಹಿರಿಯ ಸ್ಕೌಟರ್ ಹಾಗೂ ಶ್ರೀ ಮಾಧವ ಕುಲ್ಕರ್ಣಿ ಇವರು ನೇತೃತ್ವ ವಹಿಸಿದ್ದರು.

ಈ ಶಿಬಿರಕ್ಕೆ ಜಿಲ್ಲಾ ಆಸ್ಪತ್ರೆಯ ಡಾ॥ ಶಾಲಿನಿ ಸಜ್ಜನ ಅವರು ತಮ್ಮ ಸಿಬ್ಬಂದಿಯೊಂದಿಗೆ ಆಗಮಿಸಿ ರಕ್ತದಾನ ಸುಗಮವಾಗಿ ನಡೆಯಲು ಅನುವು ಮಾಡಿಕೊಟ್ಟರು.

## ಬಿಜಾಪುರ ಜಿಲ್ಲೆ

ಲಾರ್ಡ್ ಬೇಡನ್ ಪಾವೇಲರ ದಿನಾಚರಣೆ ಅಂಗವಾಗಿ ತಾಲ್ಲೂಕು ಮಟ್ಟದ "ಪದಕ ತರಬೇತಿ" ಹಾಗೂ

"ಸಮುದಾಯ ಸೇವಾ ಶಿಬಿರ" ಸುಮಾರು 5 ದಿನಗಳವರೆಗೆ ಸಂಯುಕ್ತ ಪ್ರೌಢಶಾಲೆ, ರಕ್ಕಸಗಿಯಲ್ಲಿ ಹಮ್ಮಿಕೊಳ್ಳಲಾಗಿತ್ತು. ದಿನಾಂಕ 22-2-2008 ರಿಂದ 26-2-2008ರ ವರೆಗೂ ಶಿಬಿರ ನಡೆಯಿತು.

ಮೊದಲನೆಯ ದಿನ ನೋಂದಣಿ ನಂತರ ವ್ಯವಸ್ಥೆಯ ರೀತಿಯಲ್ಲಿ ವಿಂಗಡನೆ ಮಾಡಲಾಯಿತು. ಸುಮಾರು 4-00 ಗಂಟೆಗೆ ಭಾರತ ಸ್ಕೌಟ್, ಮತ್ತು ಗೈಡ್, ಧ್ವಜಾರೋಹಣ ಮಾಡಲಾಯಿತು. ನಂತರ ಬೇಡನ್ ಪಾವೆಲ್‌ರ ದಿನಾಚರಣೆ ಹಾಗು ಸಮುದಾಯ ಸೇವೆ ಹಾಗು ಪದಕ ತರಬೇತಿ ಶಿಬಿರವನ್ನು ಶ್ರೀ ಶಿವಾ ಮೇಸ್ತ್ರಿ, ಕ್ಷೇತ್ರ ಪ್ರಚಾರಾಧಿಕಾರಿಗಳು, ಭಾರತ ಸರ್ಕಾರ ಬಿಜಾಪುರ ಇವರು ಉದ್ಘಾಟಿಸಿದರು.

ರಾಜ್ಯಯುವ ಪ್ರಶಸ್ತಿ ವಿಜೇತ ಶ್ರೀ ಅರವಿಂದ. ಹು. ಕೊಪ್ಪ, ಯುವ ಮುಖಂಡ ಶ್ರೀ ಗುರುಪ್ರಸಾದ ದೇಶಮುಖ. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ದೊಡ್ಡಬಸಪ್ಪ ನೀರಲಕೋರಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ನಿಂಬಾಳ ಇದ್ದರು. ಶಿಬಿರದ ನಾಯಕತ್ವವನ್ನು ಶ್ರೀ ಜಗದೀಶ ಎಸ್. ಬೋಳಸೂರ ವಹಿಸಿಕೊಂಡಿದ್ದು. ಸಂಯುಕ್ತ ಪ್ರೌಢಶಾಲಾ ಮುಖ್ಯ ಗುರುಗಳಾದ ಎಂ.ಎಸ್. ನಾಯಕ, ಪ್ರಾ. ಶಾ. ಮುಖ್ಯ ಗುರುಗಳಾದ ಜಿ.ಎಚ್. ಪಾಟೀಲ, ಎಸ್.ಡಿ.ಎಂ.ಸಿ. ಅಧ್ಯಕ್ಷರಾದ ಶ್ರೀ ಸಂಗಣ್ಣ ಅಲ್ಲಾಪೂರ, ಎಸ್.ಎಸ್. ಹಿರೇಮಠ ಉಪಸ್ಥಿತರಿದ್ದರು, ರಾತ್ರಿ 8 ಗಂಟೆಗೆ ಮಕ್ಕಳ ಪ್ರತಿಭೆಯನ್ನು ಮುಕ್ತವಾಗಿ ಹೊರಹೊಮ್ಮುವ ಉದ್ದೇಶದಿಂದ ಸಾಂಸ್ಕೃತಿಕ ಕಾರ್ಯಕ್ರಮ (ಶಿಬಿರಾಗ್ನಿ) ಹಮ್ಮಿಕೊಳ್ಳಲಾಗಿತ್ತು.

ಈ ಶಿಬಿರದಲ್ಲಿ ರಾಷ್ಟ್ರಧ್ವಜ, ರಾಷ್ಟ್ರಗೀತೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜ ಹಾಗೂ ಝುಂಡಾಗೀತೆ ಮತ್ತು ಪ್ರಾರ್ಥನಾ ಗೀತೆ ರಾಗಬದ್ಧವಾಗಿ ಹಾಡಿಸುತ್ತಾ ಅದರ ಅರ್ಥ ಮಕ್ಕಳಲ್ಲಿ ಮನದಟ್ಟು ಮಾಡಲಾಯಿತು. ಅದರ ಜೊತೆಯಲ್ಲಿ ಕೈ ಸಂಕೇತ, ಸೀಟಿ ಸಂಕೇತ ಹೇಳುತ್ತಾ ಮಕ್ಕಳಿಗೆ ಸ್ಕೌಟ್ ಅಂಶಗಳನ್ನು ವಿವರಿಸಲಾಯಿತು.

ತೃತೀಯ ದಿನ ಬಿ.ಪಿ.ಯವರ ಆರು ವ್ಯಾಯಾಮ ಶಿಸ್ತು ಬದ್ಧತೆಯನ್ನು ಕಲಿಸಲಾಯಿತು. ಪ್ರವೇಶ, ಪ್ರಥಮ ಸೋಪಾನ, ದ್ವಿತೀಯ ಸೋಪಾನ, ತೃತೀಯ ಸೋಪಾನ, ರಾಜ್ಯ ಪುರಸ್ಕಾರ, ರಾಷ್ಟ್ರಪತಿ ಅವಾರ್ಡ್ ಪ್ರಾವೀಣ್ಯತಾ ಪದಕ ಬಗ್ಗೆ ಮಾಹಿತಿ ನೀಡಲಾಯಿತು.

ನಾಲ್ಕನೇ ದಿನದಲ್ಲಿ ಸಮೀಪದ ನಾಲಕವಾಡ ಗ್ರಾಮದಲ್ಲಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಜಿ.ಎಸ್. ನಾಡಗೌಡರು ಕೆ.ಜಿ.ಎಮ್.ಸಿ.ಎಸ್.ನಲ್ಲಿ ಪಥ ಸಂಚಲನ ಕಾರ್ಯಕ್ರಮ ಉದ್ಘಾಟನೆ ಮಾಡಿದರು. 4 ಗಂಟೆಗೆ ಸಮಾರೋಪ ಸಮಾರಂಭ ಮಾಡಲಾಯಿತು. ಕ್ಷೇತ್ರ ಸಮನ್ವಯಾಧಿಕಾರಿ ಎಂ.ವೈ. ನದಾಫ, ತಾಲ್ಲೂಕು ನೌಕರ ಸಂಘದ ಅಧ್ಯಕ್ಷ ಎಸ್.ಆರ್. ಕಟ್ಟಿಮನಿ, ಅರವಿಂದ ಕೊಪ್ಪ ಡಿ.ಎಸ್. ಚಳಗೇರಿ, ಆರ್.ಕೆ. ಸುರಪೂರ, ಎಸ್.ಎಸ್. ಬೊಮ್ಮನಹಳ್ಳಿ, ಜಗದೀಶ, ಬೋಳಪೂರ, ಮುರಗೆಪ್ಪ ಹಡಲಗೇರಿ, ಸಿದ್ಧಲಿಂಗ ದೊಡ್ಡಮನಿ ಮುಂತಾದವರು ಉಪಸ್ಥಿತರಿದ್ದರು.

5ನೇ ದಿನ ರಕ್ಕಸಗಾ ಗ್ರಾಮದಲ್ಲಿ ಆಕರ್ಷಕ ಪಥ ಸಂಚಲನ ಮಾಡಲಾಯಿತು ಮತ್ತು ಶಿಬಿರದ ಸುತ್ತ ಮುತ್ತಲಿನ ಪ್ರದೇಶವನ್ನು ಸ್ವಚ್ಛತೆ ಮಾಡಲಾಯಿತು.

## ಬಾಗಲಕೋಟೆ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬಾಗಲಕೋಟೆ, ಸ್ಥಳೀಯ ಸಂಸ್ಥೆ ಮುಧೋಳ, ಗವಿಸಿದ್ದೇಶ್ವರ ಸ್ಕೌಟ್ ಟ್ರೂಪ್, ಭಗತ್‌ಸಿಂಗ್ ಓಪನ್ ರೋವರ್ಸ್ ಟ್ರೂಪ್, ಇವರು ದಿನಾಂಕ 22-2-2008 ರಂದು ಚಿತ್ರಭಾನುಕೋಟೆ ಶಾಲಾ ಆವರಣದಲ್ಲಿ ವಿಶ್ವ ಸ್ಕೌಟ್ ಶತಮಾನೋತ್ಸವ ಸ್ಮಾರಕದ ಉದ್ಘಾಟನಾ ಸಮಾರಂಭ ಮತ್ತು ಸ್ಕೌಟ್ ಚಳವಳಿ ಸ್ಥಾಪಕ ಲಾರ್ಡ್ ಬೇಡನ್ ಪೋವೆಲ್ಲರ 151ನೇ ಜನ್ಮ

ದಿನಾಚರಣೆಯನ್ನು ಹಮ್ಮಿಕೊಳ್ಳಲಾಗಿತ್ತು. ಇದರ ಅಧ್ಯಕ್ಷತೆಯನ್ನು ಜಿಲ್ಲಾ ಸ್ಕೌಟ್ ಕಮೀಷನರ್‌ರಾದ ಶ್ರೀ ಜಿ.ಬಿ. ಇದ್ದಲಗಿ ವಹಿಸಿದ್ದರು. ಕಾರ್ಯಕ್ರಮದ ಉದ್ಘಾಟಕರಾಗಿ ಯುವ ದುರೀಣರಾದ ಅರುಣ. ಗೋ. ಕಾರಜೋಳ ಆಗಮಿಸಿದ್ದರು. ಮುಖ್ಯ ಅತಿಥಿಗಳಾಗಿ ತಾಲೂಕು ಬಿ.ಜೆ.ಪಿ. ಅಧ್ಯಕ್ಷ ಶ್ರೀ ಆರ್.ಟಿ. ಪಾಟೀಲ, ಎ.ಪಿ.ಎಂ.ಸಿ. ಅಧ್ಯಕ್ಷರಾದ ಹೊಳಬಸಪ್ಪ ದಂಡಿನ, ಗ್ರಾಮ ಪಂಚಾಯತಿ ಅಧ್ಯಕ್ಷ ಆರ್.ಕೆ. ಪಾಟೀಲ, ಡಿ.ಓ.ಸಿ. ಎಸ್.ಎಸ್. ದಳವಾಯಿ ಟ್ರೈನಿಂಗ್ ಕೌನ್ಸಿಲರ್ ಬಸವರಾಜ ಗಂಗಣ್ಣವರ, ಸ್ಥಾನಿಕ ಆಯುಕ್ತರು ವಾಯ್ ವಿ. ಮಾಬಾ ಆರ್. ಎಸ್. ಕಂಬಾರ, ವಿ.ಎನ್. ಕುಲಕರ್ಣಿ, ಮಲ್ಲಯ್ಯ ಮಠದ, ರೋವರ್ ಲೀಡರ್, ಪ್ರವೀಣ ದೇಶಪಾಂಡೆ ಆಗಮಿಸಿದ್ದರು.

ಬೆಳಿಗ್ಗೆ 7–30 ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಲಾಗಿತ್ತು. ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್ ಬಾಗವಹಿಸಿದ್ದರು. ಪೂಜ್ಯ ಚನ್ನಬಸಯ್ಯ ಮಹಾಸ್ವಾಮಿಗಳು ಅಧ್ಯಕ್ಷತೆಯನ್ನು ವಹಿಸಿದ್ದರು. ಅಬ್ಬುಲಸಾಬ ದಂಡಿನ ವಾಲಿನ ಆಗಮಿಸಿದ್ದರು. 8–30ಕ್ಕೆ ಧ್ವಜಾರೋಹಣದ ನಂತರ ರಾಮಾರೂಢ ಮಠದಲ್ಲಿ ಶ್ರಮದಾನ ಹರಿಜನಕೇರಿ ಸ್ವಚ್ಛತೆ. ಪರಿಸರ ನೈರ್ಮಲ್ಯ ಕಾಪಾಡುವವರ ಬಗ್ಗೆ ಜನರಿಗೆ ತಿಳುವಳಿಕೆ ಹೇಳಲಾಯಿತು. ರಾತ್ರಿ 8 ಗಂಟೆಗೆ ಭವ್ಯ ಶಿಬಿರಾಗ್ನಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ರಾಜ್ಯ ಪುರಸ್ಕಾರ ಪಡೆದ 14 ಸ್ಕೌಟ್ ವಿದ್ಯಾರ್ಥಿಗಳಿಗೆ ಈ ಸಂದರ್ಭದಲ್ಲಿ ರಾಜ್ಯ ಪುರಸ್ಕಾರ ಪ್ರಶಸ್ತಿ ವಿತರಿಸಲಾಯಿತು.

## ದಾವಣಗೆರೆ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಹರಪನಹಳ್ಳಿ, ದಾವಣಗೆರೆ ಜಿಲ್ಲೆ ವತಿಯಿಂದ ತಾಲ್ಲೂಕು ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ರ‍್ಯಾಲಿಯನ್ನು ದಿನಾಂಕ : 3–3–2008 ರಿಂದ 4–3–2008ರ ವರೆಗೆ ಶ್ರೀ ನಾರದಮುನಿ ಪ್ರೌಢಶಾಲಾ ಆವರಣ, ಚಿಗಟೇರಿ ಇಲ್ಲಿ ಆಯೋಜಿಸಲಾಗಿತ್ತು.

ದಿನಾಂಕ : 3–3–08 ರಂದು ನಡೆದ ಸಮಾರಂಭದಲ್ಲಿ ಶ್ರೀ ರಾಮನ್ ಗೌಡ್ರ ಜಿ.ಪ. ಸದಸ್ಯರು ಹಾಗೂ ಅಧ್ಯಕ್ಷರು ಸ್ಥಳೀಯ ಸಂಸ್ಥೆ ಇವರು ಅಧ್ಯಕ್ಷತೆಯನ್ನು ವಹಿಸಿದ್ದರು. ಉದ್ಘಾಟನಾ ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಇ.ಎಂ. ರಾಜಶೇಖರ, ಕೇಂದ್ರ ಕಛೇರಿ ಆಯುಕ್ತರು ಆಗಮಿಸಿದ್ದರು. ಎಸ್. ಹಾಲಪ್ಪ ಇವರು, ಕಾರ್ಯದರ್ಶಿ, ಶ್ರೀ ನಾರದಮುನಿ ಪ್ರೌಢಶಾಲೆ, ಶ್ರೀ ಎಸ್. ಶಂಕರನಾಯ್ಕ, ಜಿಲ್ಲಾ ತರಬೇತಿ ಆಯುಕ್ತರು, ಮುಖ್ಯೋಪಾಧ್ಯಾಯರು ಸ.ಹಿ.ಪ್ರಾ. ಶಾಲೆ, ಚಿಗಟೇರಿ ಮುಂತಾದವರು ಉಪಸ್ಥಿತರಿದ್ದರು. ಇ ಕೊಟ್ರೇಶ, ಗ್ರಾಮ ಪಂಚಾಯ್ತಿ ಸದಸ್ಯರು ಇವರು ಮಾತನಾಡಿದರು. ರಾತ್ರಿ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ 250 ಸ್ಕೌಟ್ಸ್, ಗೈಡ್ಸ್‌ಗಳೊಂದಿಗೆ, ಚಿಗಟೇರಿ ನಗರದ ಎಲ್ಲಾ ನಾಗರೀಕರು ಪಾಲ್ಗೊಂಡರು. ದಿನಾಂಕ : 4–3–08 ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ನೆರವೇರಿಸಲಾಯಿತು. ನಗರದ ಪ್ರಮುಖ ಬೀದಿಗಳಲ್ಲಿ ಪಥಚಲನೆ ನೆರವೇರಿಸಲಾಯಿತು. ನಂತರ ಸ್ಕೌಟ್ಸ್–ಗೈಡ್ಸ್, ಕೌಶಲ್ಯಗಳನ್ನು ಮಕ್ಕಳಿಗೆ ಕಲಿಸಿ ಕೊಡಲಾಯಿತು. ಮಧ್ಯಾಹ್ನ 4 ಗಂಟೆಗೆ ಮುಕ್ತಾಯ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಸಮಾರಂಭದಲ್ಲಿ ಶ್ರೀ ಮುರುಘ ರಾಜೇಂದ್ರ ಚಿಗಟೇರಿ, ಜಿಲ್ಲಾ ಸ್ಕೌಟ್ ಆಯುಕ್ತರು ಶ್ರೀ ಮಹಮದ್ ವಾಸಿಲ್, ರಾಜ್ಯ ಸ್ಥಾನಿಕ ಆಯುಕ್ತ, ಶ್ರೀರಾಜಶೇಖರ, ಶ್ರೀ ಅಂದಾನಪ್ಪ ವಡೇಗೇರ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು.

## ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕು ಮಟ್ಟದ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್ ಬುಲ್ ಮೇಳ ಹಾಗೂ ಸಂಸ್ಥಾಪಕರ ದಿನಾಚರಣೆ

ಸಾರ್ವಜನಿಕ ಶಿಕ್ಷಣ ಇಲಾಖೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತಾಲ್ಲೂಕು ಸಂಸ್ಥೆ, ಚನ್ನರಾಯಪಟ್ಟಣ, ಗಣಪತಿ ಸೇವಾ ಸಮಿತಿ, ಹಾಗೂ ಸರ್ಕಾರಿ ಪ್ರೌಢಶಾಲೆ, ಚನ್ನರಾಯಪಟ್ಟಣ ಇವರ ಸಂಯುಕ್ತಾಶ್ರಯದಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್, ಕಬ್ಸ್ ಬುಲ್‌ಬುಲ್ಸ್ ಮೇಳ ಹಾಗೂ ಸಂಸ್ಥಾಪಕರ ದಿನಾಚರಣೆಯನ್ನು ದಿನಾಂಕ 27/02/2008 ರಂದು ಚನ್ನರಾಯಪಟ್ಟಣದ ಗಣಪತಿ ಸಭಾಮಂಟಪದಲ್ಲಿ ನಡೆಸಲಾಯಿತು. ಪೂರ್ವಾಹ್ನ ಧ್ವಜಾರೋಹಣದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಈ ಕಾರ್ಯಕ್ರಮದಲ್ಲಿ ಕ್ಷೇತ್ರಶಿಕ್ಷಣಾಧಿಕಾರಿ ಶ್ರೀ ಬೊಮ್ಮೇಗೌಡ, B.R.C. ಕಾಂತರಾಜ್, ವೃತ್ತ ನಿರೀಕ್ಷಕ ಶ್ರೀಕುಮಾರ್, A.D.C. ಗಳಾದ H.M. ಗೌಡಯ್ಯ, H.C. ತಮ್ಮಣ್ಣಗೌಡ, ಸಿದ್ಧಲಿಂಗಪ್ಪ, ಸಣ್ಣಲಿಂಗೇಗೌಡ, A.S.O.C. LT. ಲೋಕೇಶ್, ಮುಖ್ಯಶಿಕ್ಷಕ ಚಂದ್ರಶೇಖರ್, ಉಪಾಧ್ಯಕ್ಷರಾದ ಶ್ರಿ ಬ್ರಹ್ಮಪಾಲ್ ಜೈನ್, ಚ.ರಾ. ರಂಗಮ್ಮ, ಖಜಾಂಚಿ ಎ.ಎಂ. ಜಯರಾಂ, ಸಮಾಜಸೇವಕ ಪ್ರಕಾಶ್ ಜೈನ್, D.T.C. ಭರತ್, ದೇವರಾವ್, ದೇವರಾಜ್, ಗಾಯಿತ್ರಿದೇವಿ, ಹಾಜರಿದ್ದರು. ನಂತರ ನಡೆದ ಪಥಸಂಚಲನಾ ಕಾರ್ಯಕ್ರಮಕ್ಕೆ ವೃತ್ತ ನಿರೀಕ್ಷಕ, ಕುಮಾರ್‌ರವರು ಚಾಲನೆ ನೀಡಿದರು. ಪಟ್ಟಣದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯನಂತರ ಉದ್ಘಾಟನಾ ಸಮಾರಂಭ ಏರ್ಪಡಿಸಲಾಗಿತ್ತು. ಸ॥ ಪ್ರೌಢಶಾಲಾ ಮುಖ್ಯ ಶಿಕ್ಷಕ, ಚಂದ್ರಶೇಖರ್ ಜ್ಯೋತಿ ಬೆಳಗಿಸಿ ಕಾರ್ಯಕ್ರಮ ಉದ್ಘಾಟಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀ ಬೊಮ್ಮೇಗೌಡರು ಅಧ್ಯಕ್ಷತೆ ವಹಿಸಿದ್ದರು. ನಂತರ ಸ್ಕೌಟ್, ಗೈಡ್, ಕಬ್, ಬುಲ್‌ಬುಲ್‌ಗಳಿಗೆ, ದೇಶಭಕ್ತಿಗೀತೆ ಪರಿಸರದ ಬಗ್ಗೆ ಚಿತ್ರ ಬರೆಯುವಿಕೆ, ಬೆಂಕಿಯಿಲ್ಲದೆ ಅಡುಗೆ ತಯಾರಿ ಮುಂತಾದ ಸ್ಪರ್ಧಾ ಕಾರ್ಯಕ್ರಮಗಳನ್ನು ನಡೆಸಲಾಯಿತು.

ಅಪರಾಹ್ನ ಸಮಾರೋಪ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು. ತಾಲ್ಲೂಕಿನ ಕಾರ್ಯ ನಿರ್ವಹಣಾಧಿಕಾರಿ, ಶ್ರೀ ವೆಂಕಟೇಶಯ್ಯನವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಮಾತನಾಡಿದರು. ಅಧ್ಯಕ್ಷತೆ ವಹಿಸಿದ್ದ A.D.C. H.M. ಗೌಡಯ್ಯ ಇದೇ ಸಂದರ್ಭದಲ್ಲಿ ಸ್ಪರ್ಧಾ ವಿಜೇತರಿಗೆ ಬಹುಮಾನಗಳನ್ನು ಹಾಗು ಭಾಗವಹಿಸಿದ ಎಲ್ಲಾ ಸ್ಕೌಟ್ಸ್, ಗೈಡ್ಸ್, ಕಬ್ ಹಾಗೂ ಬುಲ್‌ಬುಲ್ಸ್‌ಗಳಿಗೆ ಪ್ರಮಾಣ ಪತ್ರಗಳನ್ನು ವಿತರಿಸಲಾಯಿತು.

********

ದಿನಾಂಕ: 14-03-2008 ರಂದು ಅರಸೀಕೆರೆ ತಾಲ್ಲೂಕು ಕುರುವಂಕ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಹೊಸ ಸ್ಕೌಟ್ ದಳದ ಉದ್ಘಾಟನೆಯನ್ನು ಖ್ಯಾತ ದಾನಿಗಳಾದ ಶ್ರೀ ಕೆ.ಶಿ. ವೆಂಕಟೇಶ ಮೂರ್ತಿರವರ ಅಧ್ಯಕ್ಷತೆಯಲ್ಲಿ ನೆರವೇರಿಸಲಾಯಿತು.

ಸಮಾರಂಭದಲ್ಲಿ ಸ್ಥಳೀಯ ಸಹಕಾರ ಬ್ಯಾಂಕಿನ ಅಧ್ಯಕ್ಷರಾದ ಶ್ರಿ ಗಂಗಾಧರ ರವರು ಉಪಸ್ಥಿತರಿದ್ದು, ಶುಭ ಹಾರೈಸಿದರು. ಹಾಗೂ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ನಾರಾಯಣಿ ರವರು, ಸ್ಥಳೀಯ ಸಂಸ್ಥೆಯು ಅರಸೀಕೆರೆಯ ಕಾರ್ಯದರ್ಶಿ ಗಳಾದ ಶ್ರೀ ನಾಗೇಶ್ ರವರು ಉಪಸ್ಥಿತರಿದ್ದರು. ಶ್ರೀ ಎಲ್.ಟಿ. ಲೋಕೇಶ್, ಎ.ಎಸ್.ಓ.ಸಿ. ಸಮಾರಂಭದಲ್ಲಿ ಉಪಸ್ಥಿತರಿದ್ದು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಹಾಗೂ ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿಗಳಿಗೆ ಸ್ಕೌಟ್ಸ್-ಗೈಡ್ಸ್ ಬಗ್ಗೆ ಸಂಕ್ಷಿಪ್ತವಾದ ಮಾಹಿತಿ ನೀಡಿದರು. ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜಿನ ಮುಖ್ಯಸ್ಥರು ಹಾಗೂ ಸಿ.ಎ.ಇ.ಓ. ರವರಾದ ಶ್ರೀ ಕಾಂತರಾಜಯ್ಯರವರು ಸಹಾ ಉಪಸ್ಥಿತರಿದ್ದರು.

## ಗದಗ ಜಿಲ್ಲೆ

ದಿನಾಂಕ 01-03-2008 ಮತ್ತು 02-03-2008 ರಂದು ನರಗುಂದ ತಾಲ್ಲೂಕು ಮಟ್ಟದಲ್ಲಿ ಸ್ಕೌಟ್ಸ್-ಗೈಡ್ಸ್ ಗಳಿಗಾಗಿ ಪೆಟ್ರೋಲ್ ಲೀಡರ್ ತರಬೇತಿ ಶಿಬಿರವನ್ನು ಸಂಘಟಿಸಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ನರಗುಂದ ಪುರಸಭೆಯ ಅಧ್ಯಕ್ಷಣಿ ಶ್ರೀಮತಿ ಶೈಲಾ ನರಗುಂದ ನೆರವೇರಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ವಸಂತ ಜೋಗಣ್ಣವರ ಉಪಾಧ್ಯಕ್ಷರು, ಪುರಸಭೆ, ನರಗುಂದ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಗದಗ ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ B.D. ಕಿಲಬನ್ನನವರ್, ಶ್ರೀ B.A. ವಸ್ತ್ರದ, DOC, ಶ್ರಿ B.Y. ಭಜಂತ್ರಿ, ವಿಷಯ ಪರಿವೀಕ್ಷಕರು, ಧಾರವಾಡ, ಶ್ರಿ D.H. ಅಜ್ಜಿ, ಸದಸ್ಯರು, ನೌಕರರ ಸಂಘ, ಶ್ರಿ K.G. ಆನೆಗುಂದಿ, ಅಧ್ಯಕ್ಷರು, S.D.M.C. ಇವರು ಆಗಮಿಸಿದ್ದರು.

ನರಗುಂದ ಶಹರ ವಲಯದ ವ್ಯಾಪ್ತಿಯೊಳಗಿನ H.P.K.G.S. ಶಾಲೆಯಲ್ಲಿ ಶಿಬಿರವನ್ನು ಏರ್ಪಡಿಸಲಾಗಿತ್ತು. ಆ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ H.Y. ಹುನಗುಂಡಿಯವರು ಊಟ-ವಸತಿ ವ್ಯವಸ್ಥೆ ಮಾಡಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀಮತಿ ಮಂಗಳಾ ಪಾಟೀಲ, ಮಕ್ಕಳಿಗೆ ಹಿತವಚನ ಹೇಳಿದರು. ಸಮಾರಂಭ ಅಧ್ಯಕ್ಷರಾದ ಶ್ರೀ ವಸಂತ ಜೋಗಣ್ಣವರ ಇವರು ಶಹರ ವಲಯದ 10 ಶಾಲಾ ಮಕ್ಕಳಿಗೆ ಸ್ಕೌಟ್ಸ್-ಗೈಡ್ಸ್ ಸಮವಸ್ತ್ರಗಳನ್ನು ಪುರಸಭೆಯ ವತಿಯಿಂದ ಕೊಡುವುದಾಗಿ ಭರವಸೆ ನೀಡಿದರು.

ಶ್ರೀ J.R. ಕದಂ, ಶಿಕ್ಷಕರು ಶಿಬಿರದ ನಾಯಕರಾಗಿದ್ದರು. 130 ಸ್ಕೌಟ್ಸ್-ಗೈಡ್ಸ್ ಹಾಗೂ 20 ಜನ ಶಿಕ್ಷಕರು ಪಾಲ್ಗೊಂಡಿದ್ದರು. ದಿನಾಂಕ : 2-3-2008 ರಂದು ಸಾಯಂಕಾಲ ಸಮಾರೋಪ ಸಮಾರಂಭ ಆಯೋಜಿಸಲಾಗಿತ್ತು. ಶಾಲೆಯ S.D.M.C. ಅಧ್ಯಕ್ಷರಾದ ಶ್ರೀ K.G. ಆನೇಗುಂದಿ ಅಧ್ಯಕ್ಷತೆ ವಹಿಸಿದ್ದರು.

## ತುಮಕೂರು ಜಿಲ್ಲೆ

ದಿನಾಂಕ 2-3-2008ರಂದು ತುಮಕೂರಿನ ವಿದ್ಯಾನಿಕೇತನ ಪ್ರೌಢಶಾಲೆ ಆವರಣದಲ್ಲಿ ಬೇಡನ್ ಪೋವೆಲ್ ಮತ್ತು ಲೇಡಿ ಬೇಡನ್ ಪೋವೆಲ್‌ರವರ ಜನ್ಮದಿನವನ್ನು ಹಮ್ಮಿಕೊಳ್ಳಲಾಯಿತು.

ಬೆಳಿಗ್ಗೆ 9.30 ಗಂಟೆಗೆ ಸರಿಯಾಗಿ ಶಿಬಿರದ ನಾಯಕರಾದ ಶ್ರೀ ಶಿವರುದ್ರಪ್ಪ ನವರ ಮಾರ್ಗದರ್ಶನದಲ್ಲಿ ಧ್ವಜಾರೋಹಣ ಮಾಡಲಾಯಿತು. ವಿದ್ಯಾನಿಕೇತನ ಶಾಲೆಯ ಕಾರ್ಯದರ್ಶಿಗಳಾದ ಶ್ರೀ T. C. ಜಯರಾಮ್ ರಾವ್, ಸರ್ವೋದಯಾ ಶಾಲೆಯ ಕಾರ್ಯದರ್ಶಿಗಳಾದ ಶ್ರೀ K.S. ನಂಜುಂಡಯ್ಯ ನವರು, ಶ್ರೀಮತಿ ಕಮಲಮ್ಮ ನವರು, D.C. (Guides), ವಿದ್ಯಾನಿಕೇತನ ಶಾಲೆಯ ಮುಖ್ಯೋಪಾಧ್ಯಾಯಿನಿಯರಾದ ಶ್ರೀಮತಿ B.S. ಸೀತಮ್ಮ ನವರು, ಮುಖ್ಯೋಪಾಧ್ಯಾಯರಾದ ಶ್ರೀ ಸತೀಶ್ ರವರು, ಮತ್ತು ಶಿಕ್ಷಕ ವೃಂದದವರು ಭಾಗವಹಿಸಿದ್ದರು. ಈ ಸಮಾರಂಭದಲ್ಲಿ ಸರ್ವೋದಯ, ಸೋಮೇಶ್ವರ, ಚೇತನಾ, ವಾಸವಿ ಮತ್ತು ಆರ್ಯನ್ ಶಾಲೆಯ ಕಬ್ಸ್ - ಬುಲ್‌ಬುಲ್ಸ್ ಮತ್ತು ಸ್ಕೌಟ್ಸ್, ಗೈಡ್ಸ್ ಮತ್ತು ಮಾಸ್ಟರ್‌ಗಳು ಒಟ್ಟು 375 ಜನ ಭಾಗವಹಿಸಿದ್ದರು. ನಂತರ ವಿಧವಿಧವಾದ ಚಟುವಟಿಕೆಗಳನ್ನು ನಡೆಸಲಾಯಿತು. 12 ಗಂಟೆಯಿಂದ 1 ಗಂಟೆವರೆಗೆ ಮಕ್ಕಳು ತಿಂಡಿತಿನಿಸುಗಳನ್ನು, ಫಲಹಾರಗಳನ್ನು ತಯಾರಿಸಿದರು. 3.30 ರಿಂದ 4.30ರ ವರೆಗೆ ಅಗ್ನಿಶಾಮಕ ದಳದವರು ಪ್ರದರ್ಶನ ನೀಡಿದರು. 6 ಗಂಟೆಗೆ ಧ್ವಜಾರೋಹಣ ಮಾಡಲಾಯಿತು. 6 ಗಂಟೆಯಿಂದ 7 ಗಂಟೆ ವರೆಗೆ ಶಿಬಿರಾಗ್ನಿ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಶ್ರೀ ವೀರಕ್ಯಾತಪ್ಪ DOC, ಮತ್ತು ವಿದ್ಯಾನಿಕೇತನ ಶಾಲೆಯ ಶಿಕ್ಷಕ ವೃಂದದವರು ಈ ಶಿಬಿರವು ಯಶಸ್ವಿಯಾಗಲು ಶ್ರಮಿಸಿರುತ್ತಾರೆ.

ಈ ಕಾರ್ಯಕ್ರಮದಲ್ಲಿ ಶ್ರೀಮತಿ ಆಶಾ ಪ್ರಸನ್ನ ಕುಮಾರ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಪ್ರಸನ್ನ ಕುಮಾರ್ ಮತ್ತು ಶ್ರೀ ವೇಣುಗೋಪಾಲಕೃಷ್ಣ DC. (ಸ್ಕೌಟ್ಸ್) ಮತ್ತು ಶ್ರೀ ಸುರೇಂದ್ರಷಾ, ಶ್ರೀ C.R. ಸತೀಶ್, ಶ್ರೀ ಅಮರನಾಥ್, ರಾಷ್ಟ್ರಪತಿ ಪುರಸ್ಕೃತರು ಭಾಗವಹಿಸಿದ್ದರು. ವಿದ್ಯಾನಿಕೇತನ ಸಂಸ್ಥೆಯ ಅಧ್ಯಕ್ಷರಾದ ಶ್ರೀ N.R. ಜಗದೀಶ್ ರವರು, ಶ್ರೀ K.S. ನಂಜುಂಡಯ್ಯ ನವರು, ಸರ್ವೋದಯಾ ಶಾಲೆಯ ಕಾರ್ಯದರ್ಶಿಗಳು, ಶ್ರೀ C.P. ರಾಜಪ್ಪ ರವರು ಈ ಕಾರ್ಯಕ್ರಮದ ಯಶಸ್ಸಿಗೆ ಕಾರಣಕರ್ತರಾಗಿರುತ್ತಾರೆ.

* * * * * * *

ತುಮಕೂರಿನ ಚೇತನ ವಿದ್ಯಾಮಂದಿರ, ಸ್ಕೌಟ್/ಗೈಡ್/ಕಬ್/ಬುಲ್‌ಬುಲ್‌ಗಳು ಇತ್ತೀಚೆಗೆ ದೇವರಾಯನ ದುರ್ಗ ಹಾಗೂ ಕೋಲಾರ ದೇವಸ್ಥಾನಗಳಿಗೆ ಹೊರ ಸಂಚಾರ ಹೋಗಿ, ಅಡುಗೆ ತಯಾರಿಸುವ ಕೌಶಲ ಪ್ರದರ್ಶಿಸಿದರು. 146 ಮಕ್ಕಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು.

* * * * * * *

ಸ್ಕೌಟ್ ಶತಮಾನೋತ್ಸವ ಜಿಲ್ಲಾ ರ‍್ಯಾಲಿಯನ್ನು ದಿನಾಂಕ: 12–13ನೇ ಏಪ್ರಿಲ್ 2008 ರಂದು ವಸ್ತು ಪ್ರದರ್ಶನ ಆವರಣ ಸಿದ್ಧಗಂಗಾ ಮಠ ತುಮಕೂರು. ಇಲ್ಲಿ ನಡೆಸಲಾಯಿತು. ದಿನಾಂಕ : 12/4/2008ರಂದು ರ‍್ಯಾಲಿಯನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಉದ್ಘಾಟಿಸಿದರು. ಶ್ರೀಮತಿ ರವಿವೆಸ್ಲಿ, H.Q.C. ಇವರು ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಮತಿ ಆಶಾಪ್ರಸನ್ನಕುಮಾರ್ ರವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಈ ಕೆಳಕಂಡ ಹಿರಿಯ ಸ್ಕೌಟ್ ಗೈಡ್, ಸದಸ್ಯರುಗಳಿಗೆ ಸನ್ಮಾನ ಮಾಡಲಾಯಿತು.

ಶ್ರೀ ಬರ್ನಾಡ್‌ರವರು – ಕುಣಿಗಲ್, ಶ್ರೀ ಶಿವಯ್ಯ ನವರು – ತುಮಕೂರು, ಶ್ರೀ ಶಿವಾಜಿರಾವ್‌ರವರು – ಗುಬ್ಬಿ. ಶ್ರೀ ಪಾತಲಿಂಗಯ್ಯನವರು – ಶಿರಾ, ಶ್ರೀ ಚಿಕ್ಕಣ್ಣನವರು – ಕೊರಟಗೆರೆ, ಶ್ರೀಮತಿ ಎನ್.ಕೆ. ಛಾಯಾರವರು–ಡಿಟಿಸಿ, ಶ್ರೀ ಕೆ.ಎಸ್. ಕಮಲಮ್ಮನವರು – ಡಿ.ಸಿ(ಜಿ), ಶ್ರೀ ಶಿವರುದ್ರಪ್ಪ ನವರು – ಹೆಚ್.ಕ್ಯೂ.ಸಿ., ಶ್ರೀ ಎಂ. ರೇಣುಕಾರಾಧ್ಯ ಸಂಚಾಲಕರು, ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಮಲ್ಲಿಕಾರ್ಜುನಯ್ಯ ನವರು–ಅಧೀಕ್ಷಕರು ಟಿ.ಟಿ.ಐ., ಸಮಾರಾಂಭದಲ್ಲಿ ಹಾಜರಿದ್ದರು.

ರ‍್ಯಾಲಿಯ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ B.R. ವೇಣುಗೋಪಾಲಕೃಷ್ಣರವರು ವಹಿಸಿದ್ದರು. ಶ್ರೀಮತಿ ಕೆ.ಎಸ್. ಕಮಲ, ಶ್ರೀಮತಿ ಜೀವರತ್ನ ಬಿಸನೀರ್‌ರವರು ಮುಖ್ಯ ಅತಿಥಿಗಳಾಗಿ ಭಾಗಿವಹಿಸಿದ್ದರು.

ಎರಡು ದಿನಗಳು ನಡೆದ ಜಿಲ್ಲಾ ರ‍್ಯಾಲಿಯ ನೇತೃತ್ವವನ್ನು ಶ್ರೀ ಶಿವರುದ್ರಪ್ಪನವರು ಮತ್ತು ಸ್ಕೌಟ್ಸ್, ಗೈಡ್ಸ್ ವಿಭಾಗದ ನೇತೃತ್ವನ್ನು ಶ್ರೀಕಾಂತರಾಜು ಹಾಗೂ ಶ್ರೀಮತಿ ಚೇತನಾ ಆನಂದ್‌ರವರು ವಹಿಸಿದ್ದರು. ಸರ್ವಧರ್ಮ ಪ್ರಾರ್ಥನೆಯನ್ನು ಶ್ರೀಮತಿ ಎನ್.ಕೆ. ಛಾಯಾರವರ ನೇತೃತ್ವದಲ್ಲಿ ನಡೆಸಲಾಯಿತು. ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಸುರೇಂದ್ರ ಷಾರವರು ಉದ್ಘಾಟಿಸಿದರು. ರ‍್ಯಾಲಿಯಲ್ಲಿ ಸಾಹಸ ಚಟುವಟಿಕೆಗಳನ್ನು ನಡೆಸಲಾಯಿತು.

ಜಿಲ್ಲೆಯ ವಿವಿಧ ತಾಲ್ಲೂಕ್‌ಗಳಿಂದ ಸ್ಕೌಟ್ ಗೈಡ್ ಮಕ್ಕಳು ಮತ್ತು ಶಿಕ್ಷಕರು, ಎ.ಡಿ.ಸಿ.ಗಳಾದ

ಶ್ರೀಮತಿ ನಾಗರತ್ನಮ್ಮ, ಶ್ರೀ ಡಿ.ಟಿ. ಶ್ರೀನಿವಾಸಮೂರ್ತಿ: ಶ್ರೀ ಕಿಶೋರ್ ಕುಮಾರ್, ಇತರೆ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು. ಶ್ರೀ ಗುರುರಾಜ್ ರಾವ್ ಎಲ್ಲರಿಗೂ ವಂದಿಸಿದರು.

## ಉಡುಪಿ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉಡುಪಿ ಜಿಲ್ಲೆಯ ಹಿಮಾಲಯ ವೃಕ್ಷಮಣಿಧಾರರ ಸಮಾವೇಶ ದಿನಾಂಕ : 8-3-2008 ರಂದು ಕಡಿಯಾಳಿಯಲ್ಲಿ ಸಂಘಟಿಸಲಾಯಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕ-ಶಿಕ್ಷಕಿಯರ ಉನ್ನತ ತರಬೇತಿ ಹಿಮಾಲಯ ವುಡ್ ಬ್ಯಾಡ್ಜ್ ಪಡೆದವರ ಹಾಗೂ ರಾಜ್ಯಪುರಸ್ಕಾರ, ರಾಷ್ಟ್ರಪತಿ ಪದಕಕ್ಕೆ ವಿದ್ಯಾರ್ಥಿಗಳನ್ನು ತಯಾರಿಗೊಳಿಸುವ ಸ್ಕೌಟ್ಸ್-ಗೈಡ್ಸ್ ಶಿಕ್ಷಕ-ಶಿಕ್ಷಕಿಯರ ಸಮಾವೇಶವನ್ನು ಸಂಘಟಿಸಲಾಯಿತು.

ಸಮಾವೇಶ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರಿ ಪಾಂಗಾಳ ರಬೀಂದ್ರನಾಯಕ್ ಮಹಾ ಪೋಷಕರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಉಡುಪಿ ಜಿಲ್ಲಾ ಸಂಸ್ಥೆ ಇವರು ವಹಿಸಿದ್ದರು. ಎಲ್ಲಾ ಸ್ಕೌಟ್ಸ್-ಗೈಡ್ಸ್ ದಳಗಳಲ್ಲಿ ಉತ್ತಮ ಸಮಾಜಸೇವಾ ಚಟುವಟಿಕೆಗಳನ್ನು ಮಾಡುವ ಮೂಲಕ ವಿದ್ಯಾರ್ಥಿಗಳಿಗೆ ಉತ್ತಮ ತರಬೇತಿಯನ್ನು ನೀಡಿ ವಿದ್ಯಾರ್ಥಿಗಳಿಗೆ ಪ್ರಗತಿಪರ ತರಬೇತಿಯನ್ನು ನೀಡಿ ರಾಜ್ಯಪುರಸ್ಕಾರ, ರಾಷ್ಟ್ರಪತಿ ಪದಕ ಪಡೆಯಲು ಪ್ರೋತ್ಸಾಹಿಸಬೇಕೆಂದು ತಿಳಿಸಿದರು. ಶ್ರೀಮತಿ ಪ್ರತಿಭಾ ಎಲ್. ಸಾಮಗ ಮುಖ್ಯೋಪಾಧ್ಯಾಯಿನಿ, ಯು. ಕಮಲಾಬಾಯ್ ಪ್ರೌಢಶಾಲೆ, ಕಡಿಯಾಳಿ ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ, ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಬಿ.ಜಿ.ವಾರಂಬಳ್ಳಿ ಸ್ಥಾನಿಕ ಆಯುಕ್ತರು (ಸ್ಕೌಟ್ಸ್) ವೇದಿಕೆಯಲ್ಲಿ ಉಪಸ್ಥಿತರಿದ್ಧರು.

ಸಮಾವೇಶದಲ್ಲಿ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಶ್ರೀ ಕೊಗ್ಗ ಗಾಣಿಗ ಹಿಮಾಲಯ ವೃಕ್ಷ ಮಣಿಧಾರಕರ ಪಾತ್ರ ಮತ್ತು ಕರ್ತವ್ಯದ ಬಗ್ಗೆ ಮಾಹಿತಿ ನೀಡಿದರು. ವಿದ್ಯಾರ್ಥಿಗಳ ಪ್ರಗತಿ ಪರ ತರಬೇತಿ ರಾಜ್ಯಪುರಸ್ಕಾರ- ರಾಷ್ಟ್ರಪತಿ ಸ್ಕೌಟ್/ ಚತುರ್ಥ ಚರಣ ಕಬ್ಸ್/ ಹೀರಕ್ ಪಂಕ್ ಬುಲ್‌ಬುಲ್ಸ್ ಬಗ್ಗೆ ಶ್ರಿ ಎಂ. ಪ್ರಭಾಕರ ಭಟ್ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ವಿವರಿಸಿದರು. ಶ್ರೀ ಬಿ.ಜಿ. ವಾರಂಬಳ್ಳಿ, ಸ್ಥಾನೀಕ ಆಯುಕ್ತರು ಪ್ರಾವಿಣ್ಯತಾ ಪದಕಗಳ ಬಗ್ಗೆ ತಿಳಿಸಿದರು. ದಳದ ವಾರ್ಷಿಕ ಶಿಬಿರ/ಹೊರ ಸಂಚಾರ/ ಮಿನಿ ರ್‍ಯಾಲಿಯ ಬಗ್ಗೆ ಶ್ರೀ ಆನಂದ ಅಡಿಗ ಎ.ಎಲ್.ಟಿ. (ಸ್ಕೌಟ್ಸ್) ಮಾಹಿತಿ ನೀಡಿದರು. ಶ್ರೀ ಸದಾಶಿವ ಭಟ್ ಪ್ರಧಾನ ಮಂತ್ರಿ ಪಾರಿತೋಷಕ ಸ್ಪರ್ಧೆಯ ಬಗ್ಗೆ ತರಬೇತಿ ನೀಡಿದರು.

ಇದೇ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆಯ ವ್ಯತಿಯಿಂದ ವಿಶ್ವ ಮಹಿಳಾ ದಿನಾಚರಣೆಯನ್ನು ಅಚರಿಸಲಾಯಿತು.

********

## ಕೃಷಿ ಜಾಗೃತಿ, ತೋಟಗಾಕೆ ತರಬೇತಿ

ಬ್ರಹ್ಮಾವರ ಕೃಷಿ ವಿಜ್ಞಾನ ಕೇಂದ್ರ ಕಡಿಯಾಳಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ ಹಾಗೂ ಬ್ರಹ್ಮಾವರ ಸ್ಥಳೀಯ ಸಂಸ್ಥೆ ವತಿಯಿಂದ ಕೃಷಿ ಜಾಗೃತಿ ಮತ್ತು ಕೃಷಿ ತೋಟಗಾರಿಕೆ ಬಗ್ಗೆ ಮೂರು ದಿನಗಳ ತರಬೇತಿ ಶಿಬಿರ ಬ್ರಹ್ಮಾವರ ಕೃಷಿ ವಿಜ್ಞಾನ ಕೇಂದ್ರದಲ್ಲಿ ಇತ್ತೀಚೆಗೆ ಜರುಗಿತು.

ಜಿಲ್ಲಾಧಿಕಾರಿಗಳಾದ ಶ್ರೀಮತಿ ಪಿ. ಹೇಮಲತಾ ಭಾ.ಆ.ಸೇ. ಇವರು ಉದ್ಘಾಟಿಸಿದರು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಹಾ ಪೋಷಕ ಪಾಂಗಾಳ ರಬೀಂದ್ರ ನಾಯಕ್ ಮಾತನಾಡಿ, ಯುವ ಪೀಳಿಗೆ ಕೃಷಿ ಕ್ಷೇತ್ರದಲ್ಲಿ ಆಸಕ್ತಿಯಿಂದ ತೊಡಗಿಸಿಕೊಂಡು

ಉತ್ಪಾದನೆ ಸಾಮರ್ಥ್ಯ ಹೆಚ್ಚಿಸಬೇಕು ಹಾಗೂ ರೈತರು ಮತ್ತು ಯುವ ಪೀಳಿಗೆ ವೈಜ್ಞಾನಿಕ ಕೃಷಿಯಲ್ಲಿ ತ್ವರಿತ ಗತಿಯಲ್ಲಿ ಅಳವಡಿಸಿಕೊಳ್ಳಬೇಕು ಎಂದರು.

ಮುಖ್ಯ ಅತಿಥಿ ಬೆಂಗಳೂರು ಕೃಷಿ ವಿಶ್ವ ವಿದ್ಯಾನಿಲಯದ ಬೋರ್ಡ್ ಆಫ್ ರೀಜೆಂಟ್ ಶ್ರೀ ಎಸ್.ಡಿ. ಸಂಪತ್ ಸಾಮ್ರಾಜ್ಯ ಮಾತನಾಡಿ, ಗ್ರಾಮೀಣಾಭಿವೃದ್ಧಿಗೆ ಹೆಚ್ಚಾಗಿ ಒತ್ತು ನೀಡಿ ಪಟ್ಟಣ/ನಗರಗಳಿಗೆ ರೈತರು ವಲಸೆ ಹೋಗುವುದನ್ನು ತಡೆಯಬೇಕಾಗಿದೆ ಎಂದರು.

ಬ್ರಹ್ಮಾವರ ಸಹಸಂಶೋಧನಾ ನಿರ್ದೇಶಕ ಡಾ.ಟಿ. ಆರ್. ಗುರುಪ್ರಸಾದ್, ಮಣಿಪಾಲ ಭಾರತೀಯ ವಿಕಾಸ ಟ್ರಸ್ಟಿನ ಮ್ಯಾನೇಜಿಂಗ್ ಟ್ರಸ್ಟಿ ಕೆ.ಎಂ. ಉಡುಪ, ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಆಯುಕ್ತ ಎಡ್ವಿನ್ ಆಳ್ವ ಉಪಸ್ಥಿತರಿದ್ದರು.

ಬ್ರಹ್ಮಾವರ ಕೃಷಿ ವಿಜ್ಞಾನ ಕೇಂದ್ರ ಯೋಜನಾ ಸಂಯೋಜಕ ಡಾ. ಎಂ.ಕೆ. ಹೊನ್ನಬೈರಯ್ಯ ಸ್ವಾಗತಿಸಿದರು. ಡಾ. ಎಂ.ಆರ್. ಆನಂದ್ ಕಾರ್ಯಕ್ರಮ ನಿರೂಪಿಸಿದರು. ಕೊಗ್ಗ ಗಾಣಿಗ ವಂದಿಸಿದರು. ಶ್ರೀ ಶೇಖರ ಪೂಜಾರಿ ಶಿಬಿರದ ನಾಯಕರಾಗಿದ್ದರು.

## ಮೈಸೂರು ಜಿಲ್ಲೆ

ದಿನಾಂಕ 22-2-2008 ರ ರಂದು ಸಂತ ಜೋಸೆಫರ ಪ್ರೌಢ ಶಾಲಾ ಆವರಣದಲ್ಲಿ ಹುಣಸೂರು ತಾಲ್ಲೂಕಿನ ಸ್ಥಳೀಯ ಸಂಸ್ಥೆಯ ವತಿಯಿಂದ ಚಿಂತನಾದಿನ ಆಚರಿಸಲಾಯಿತು. ತಾಲ್ಲೂಕಿನ ವಿವಿಧ ಶಾಲೆಗಳಿಂದ 115 ಸ್ಕೌಟ್, ಗೈಡ್‌ಗಳು ಭಾಗವಹಿಸಿದ್ದರು. ಕಾರ್ಯಕ್ರಮ ಸರ್ವಧರ್ಮಯೊಂದಿಗೆ ಪ್ರಾರಂಭವಾಯಿತು. ನಂತರ ಪರಿಸರ ಸ್ವಚ್ಛತೆಯ ಬಗ್ಗೆ ಮಾಹಿತ ನೀಡಲಾಯಿತು. ಅದಾವ ನಂತರ ಎಲ್ಲಾ ವಿದ್ಯಾರ್ಥಿಗಳು ಪರಿಸರ ಸ್ವಚ್ಛತಾ ಕಾರ್ಯದಲ್ಲಿ ಬಹು ಉತ್ಸಾಹದಿಂದ ಭಾಗವಹಿಸಿದರು. 3 ಗಂಟೆಗೆ ಸರಿಯಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂತಜೋಸೆಫರ ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯಿನಿ ಯವರು ಉದ್ಘಾಟಿಸಿದರು. ಸ್ಕೌಟ್ ಶಿಕ್ಷಕಿ ಗುಡ್ಡಪ್ಪಗೌಡ ಡಿ. ರವರು ಕಾರ್ಯಕ್ರಮ ನಿರೂಪಿಸಿದರು. ಗೈಡ್ ನಿಸರ್ಗರವರು ವಂದನಾರ್ಪಣೆಯನ್ನು ಸಲ್ಲಿಸಿದರು.

## ಬಳ್ಳಾರಿ ಜಿಲ್ಲೆ

### ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳು ಕಡ್ಡಾಯ ಅಗತ್ಯ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಬಳ್ಳಾರಿ ಇವರ ಆಶ್ರಯದಲ್ಲಿ ನಗರದಲ್ಲಿ ದಿನಾಂಕ: 19-4-2008 ರಂದು ಹಮ್ಮಿಕೊಂಡಿದ್ದ ಜಿಲ್ಲಾ ಮಟ್ಟದ ಹಿಮಾಲಯ ವುಡ್ ಬ್ಯಾಡ್ಜ್ ಪದವೀಧರರ ಸಮಾವೇಶದ ಸಮಾರೋಪ ಸಮಾರಂಭ ಹಾಗೂ ರಾಷ್ಟ್ರಪತಿ ಸ್ಕೌಟ್ಸ್ ಗೈಡ್ಸ್‌ಗಳಿಗೆ ಪ್ರಮಾಣ ಪತ್ರ ವಿತರಣೆ ಕಾರ್ಯಕ್ರಮದಲ್ಲಿ ವಿಮ್ಸ್ ನಿರ್ದೇಶಕರಾದ ಡಾ. ಖಾಜಾ ನಸೀರುದ್ದೀನ್ **"ಸ್ಕೌಟ್ಸ್ ಮತ್ತು ಗೈಡ್ಸ್" ಕಾರ್ಯಕ್ರಮಗಳು ಪ್ರತಿಯೊಂದು ಶಾಲೆಯಲ್ಲೂ ಕಡ್ಡಾಯವಾಗಬೇಕು** ಎಂದು ಅಭಿಪ್ರಾಯ ಪಟ್ಟರು.

ಈ ರೀತಿಯ ಚಳವಳಿಗಳು ಮಕ್ಕಳಲ್ಲಿ ಮಾನವೀಯ ಮೌಲ್ಯ, ಬಡವರು, ಶೋಷಿತರ ಬಗ್ಗೆ ಕಾಳಜಿ, ಸೇವಾ ಮನೋಭಾವನೆ, ದೇಶಪ್ರೇಮ ಬೆಳೆಸುವ ಮೂಲಕ ನಿಜವಾದ ನಾಗರಿಕರನ್ನಾಗಿ ರೂಪಿಸುತ್ತದೆ. ಸಮಾಜಸೇವೆಗೆ ಅವರು ಸನ್ನದ್ಧರಾಗುವಂತೆ ಪ್ರೇರೇಪಿಸುತ್ತವೆ ಎಂದರು.

ಇಂದಿನ ದಿನಗಳಲ್ಲಿ ಯುವಕರು ದುಶ್ಚಟಗಳಿಗೆ ಬಲಿಯಾಗಿ ದಾರಿ ತಪ್ಪುತ್ತಿದ್ದಾರೆ. ಮಾದಕ ವಸ್ತುಗಳ ಸೇವನೆ ಮುಂತಾದ ಕೆಟ್ಟ ಹವ್ಯಾಸಕ್ಕೆ ಸಿಲುಕಿ ಆರೋಗ್ಯವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಇಂಥ ಸನ್ನಿವೇಶದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಕ್ರಮಗಳು ಮೌಲ್ಯಗಳನ್ನು ಕಲಿಸುವ ಮೂಲಕ ಸತ್ಪ್ರಜೆಗಳನ್ನು ರೂಪಿಸುವ ಕೆಲಸ ಮಾಡುತ್ತದೆ ಎಂದು ಹೇಳಿದರು.

ಮಕ್ಕಳು ವೈದ್ಯರಾಗಲಿ, ಇಂಜಿನಿಯರ್, ರಾಜಕಾರಣಿ ಏನೇ ಆದರೂ ಸಮಾಜಕ್ಕೆ ಮಾದರಿಯಾಗಿ ಬೆಳೆಯಬೇಕು. ಭವಿಷ್ಯದ ಪೀಳಿಗೆ ಅನುಸರಿಸುವಂಥ ವ್ಯಕ್ತಿತ್ವವನ್ನು ಸಂಪಾದಿಸಿಕೊಳ್ಳಬೇಕು ಎಂದು ಕರೆ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಆರ್. ವೆಂಕಣ್ಣ ಜಿಲ್ಲಾ ಆಯುಕ್ತರುಗಳಾದ ಡಾ. ಟಿ. ರಾಮನಾಥ್, ಶ್ರೀಮತಿ ಶಾಂತಲಕ್ಷ್ಮಿ ಜಯರಾಮ್, ಕೋಶಾಧಿಕಾರಿ ಶ್ರೀ ವಿ. ಪ್ರಭಾಕರ್ ಕಾರ್ಯಕ್ರಮದಲ್ಲಿ ಹಾಜರಿದ್ದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿರೆಡ್ಡಿ ಕಾರ್ಯಕ್ರಮವನ್ನುದ್ದೇಶಿಸಿ ಮಾತನಾಡಿದರು. ಶ್ರಿ ಎಂ. ನಾಗರಾಜ್ ಸ್ವಾಗತಿಸಿದರು. ಶ್ರೀ ಆರ್. ಚಂದ್ರಪ್ಪ ವಂದಿಸಿದರು.

## Coming Event National

| Name of the Event | Date | Venue | Eligibilities |
|---|---|---|---|
| National Level Trekking and Nature study Programme | 16 to 25 May 2008 | Govt. Inter-College, Song, District-Bageshwar, Uttaranchal State | Senior Scout/Guide, Rover/ Rangers between 16 to 25 Years of Age |
| National Rover Ranger Samagam | 01 to 07 June 2008 | State Training Center, Taradevi (Haryana & Punjab) | Rover/Rangers between 18 to 25 Years of Age |

## Coming Event International

| Name of the Event | Date | Venue | Eligibilities | COST Approximate |
|---|---|---|---|---|
| 10th Wrold Scout Youth Forum | 07 to 10 July 2008 | Wonkwang University. Iksan Republic of Korea | Senior Scout/ Rover & Adult Leaders | Rs. 11,051 (Fee) + Rs. 3,000 (Caution Money) + Rs.44,000 Air Fare |
| 38th World Scout Conference | 14 to 18 July 2008 | Jeju Island, Republic of Korea | Senior Scout/ Rover & Adult Leaders | Observer above 26 years Rs. 25,279 & Observer below 26 Years Rs. 23,244 (Fee) + Rs.3,000 (Caution Money) + Rs.44,400 Air Fare + Accomodation Charge |
| International Guide Camp 2008 | 17 to 22 August 2008 | Ulu Kenas Forest Reserve & Nation Building Camp at Kaula Kangsar, Peark. | Between 13 to 15 Years | Rs. 250 USD (Fee) + Rs. 3,000 (Caution Money) + Rs.30,000 Air Fare |

# GONE HOME



## Smt. U. Damayanthi, H.W.B. (G)

Joint Secretary, (Guides), Former State Council Member

Udupi District Association

Passed away at Udupi

on 14-04-2008 after brief illness



## Mr. K. Druva Rao, L.T. (S)

Bharat Scouts & Guides, Bangalore North District

& Head Master (Retd.) HMT High School

Passed away on

25th April 2008 at Bangalore

## Smt. Hemavathi Sampath Kumar

Former D.C. (G) Mandya District

Passed away at Mandya on 20 April 08 after brief illness

She served as D.C (G) Mandya for number of years and actively Participated in all the Programmes & Activitives of the Movement. She leaves behind her husband Sri M.R. Sampath Kumar an active Scout Leader and a wellknown HAM of Karnataka State and one daughter and grand Children.

**WE JOIN MEMBERS OF THE FAMILY IN PRAYING FOR THE DEPARTED SOULS**

**MAY THEIR SOULS REST IN PEACE**

*STATE SECRETARY*






ಾಪುರ ಜಿಲ್ಲೆ ಮುದ್ದೇಬಿಹಾಳ್‌ನಲ್ಲಿ ನಡೆದ ಸಂಸ್ಥಾಪಕರ ದಿನಾಚರಣೆ ಸಮುದಾಯ ಸೇವಾ ಹಾಗೂ ಪದಕ ಬೇತಿ ಶಿಬಿರದ ಸಂದರ್ಭದಲ್ಲಿ ಶ್ರೀ ಶಿವಾಮೇಸ್ತ್ರಿ, ಕ್ಷೇತ್ರ ಪ್ರಚಾರಾಧಿಕಾರಿ, ಬಿಜಾಪುರ, ಶ್ರೀ ದೊಡ್ಡಬಸಪ್ಪ ಣಾಧಿಕಾರಿ, ನೀರಲಕೇರಿ, ಶ್ರೀ ಎಸ್.ಎಸ್. ನಿಂಬಾಳ್, ಜಿಲ್ಲಾ ಕಾರ್ಯದರ್ಶಿ ಹಾಗೂ ರಾಜ್ಯ ಯುವ ಪ್ರಶಸ್ತಿ ೇತ ಶ್ರೀ ಅರವಿಂದ ಕೊಪ್ಪ, ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ಎಸ್.ಎನ್. ಹಿರೇಮಠ್, ಸಿ.ಬಿ.ಓ. ಶ್ರೀ ಎಂ.ಎಸ್. ಯಕ ಮತ್ತು ಶಿಬಿರದ ನಾಯಕರಾದ ಶ್ರೀ ಜಗದೀಶ್ ಚೋಳಸೂರ ಇವರುಗಳನ್ನು ಚಿತ್ರದಲ್ಲಿ ಕಾಣಬಹುದು.

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದ ಮಾರ್ಥೋಮಾ ಶಾಲೆಯ ಸ್ಕೌಟುಗಳು ಸಾಹಸ ಚಟುವಟಿಕೆಯಲ್ಲಿ ತೊಡಗಿರುವುದು.



ಂಕ 20-2-08ರಂದು ದಾವಣಗೆರೆ ಜಿಲ್ಲೆ, ಜಗಳೂರು(ತಾ) ಚಿಕ್ಕಮಲ್ಲನ ಹೊಳೆ, ಬಸವೇಶ್ವರ ಪರಿಶಿಷ್ಟ ಪ್ರೌಢಶಾಲೆ ಸರಕಾರಿ ಹಿರಿಯ ಪೌಢಶಾಲೆ ಇವರ ಸಂಯುಕ್ತ ಯದಲ್ಲಿ ದೀಕ್ಷಾ ಸಮಾರಂಭದ ಉದ್ಘಾಟನೆಯನ್ನು ಗ್ರಾ. ಪಂ. ಅಧ್ಯಕ್ಷರು ಆದ ತಿಪ್ಪೇಸ್ವಾಮಿ ನೇರವೇರಿಸಿದರು. ಈ ಸಂದರ್ಭದಲ್ಲಿ ಶ್ರೀ ನಾಗರಾಜ್ ಮುಖ್ಯ ರು, ಶ್ರೀ ನೀಲಪ್ಪ, ಗ್ರಾಮ ಪಂಚಾಯಿತಿ ಸದಸ್ಯರು ಶ್ರೀ ಜಿ.ಎಂ. ರುದ್ರಯ್ಯ, ಶ್ರೀಮತಿ ಂಜುಳ ಹಾಗೂ ಶಾಲಾ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ದಿನಾಂಕ 3-3-2008ರಂದು ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ರ್‍ಯಾಲಿಯ ಉದ್ಘಾಟನೆಯನ್ನು ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ರಾಮನಗೌಡ್ರು ದೀಪ ಬೆಳಗಿಸುವ ಮೂಲಕ ನೇರವೇರಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಮತ್ತು ಚಿಗಟೇರಿಯ ಶ್ರೀ ನಾರದ ಮುನಿ ಪ್ರೌಢಶಾಲಾ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



ಲಬರ್ಗಾ ಜಿಲ್ಲೆಯ ವೆಂಚರ್ ಕ್ಲಬ್‌ವತಿಯಿಂದ ನಡೆದ ರಕ್ತದಾನ ಶಿಬಿರ.



ಗದಗ ಜಿಲ್ಲೆ ನರಗುಂದದಲ್ಲಿ ನಡೆದ ಪೆಟ್ರೋಲ್ ನಾಯಕರ ತರಬೇತಿ ಶಿಬಿರದಲ್ಲಿ ಶ್ರೀ ವಸಂತ ಜೋಗಣ್ಣನವರ ಉಪಾಧ್ಯಕ್ಷರು, ಪುರಸಭೆ, ನರಗುಂದ ಮಾತನಾಡುತ್ತಿರುವುದು. ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಬಿ.ಪಿ.ವ್ಯಾಯಾಮದಲ್ಲಿ ತೊಡಗಿರುವ ತುಮಕೂರಿನ ಚೇತನ ವಿದ್ಯಾಮಂದಿರದ ಸ್ಕೌಟ್ಸ್‌ಗಳು.



ಸ್ವಚ್ಛತಾ ಕಾರ್ಯದಲ್ಲಿ ತೊಡಗಿರುವ ಮೈಸೂರು ಜಿಲ್ಲೆಯ ಹುಣಸೂರಿನ ಗೈಡ್ಸ್‌ಗಳು.



ಕೃಷಿ, ತೋಟಗಾರಿಕೆ ತರಬೇತಿಯಲ್ಲಿ ತೊಡಗಿರುವ ಉಡುಪಿ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.

100 A Hundred years of Promise 2007
Scouting Celebrates Centenary In 2007

YOUR SUPPORT WILL HELP US TO REACH OUR GOAL



Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 30-4-2008



ಸ್ಕೌಟ್ ಶತಮಾನೋತ್ಸವ – 2007

Price Rs. 3.00/- per copy only



# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

News Magazine

**If not delivered please return to :**

EDITOR, Karnataka Scout & Guide
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227

8. SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase. West of Chord Road,
Mahalakshmipuram, Bangalore-560086.

Published for : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.